# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಆಗಸ್ಟ್ ೧೧, ೨೦೧೬ (ಶ್ರಾವಣ ೨೦, ಶಕ ವರ್ಷ ೧೯೩೮)<br>Bengaluru, Thursday, August 11, 2016 ( Shravana 20, Shaka Varsha 1938) | ಸಂಚಿಕೆ ೩೨<br>Issue 32 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ

**ವಿಷಯ:** 2011ರ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮದ ಉಪಬಂಧಗಳಲ್ಲಿ ನಿಗಧಿಪಡಿಸಿರುವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1) ದಿನಾಂಕ: 06–04–2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011.
2) ಸರ್ಕಾರದ ದಿನಾಂಕ: 27/08/2012ರ ಆದೇಶ ಸಂಖ್ಯೆ: ಇಡಿ 48 ಟಿವಿಇ 2012.
3) ಸರ್ಕಾರದ ದಿನಾಂಕ: 08/10/2013ರ ಆದೇಶ ಸಂಖ್ಯೆ: ಇಡಿ 161 ಟಿವಿಇ 2013.
4) ಸರ್ಕಾರದ ದಿನಾಂಕ: 25/06/2014ರ ಆದೇಶ ಸಂಖ್ಯೆ: ಇಡಿ 161 ಟಿವಿಇ 2013.
5) ಸರ್ಕಾರದ ದಿನಾಂಕ: 12/05/2015ರ ಆದೇಶ ಸಂಖ್ಯೆ: ಇಡಿ 48 ಟಿವಿಇ 2015.
6) ಸರ್ಕಾರದ ದಿನಾಂಕ: 15/10/2015ರ ಆದೇಶ ಸಂಖ್ಯೆ: ಇಡಿ 117 ಟಿವಿಇ 2015.
7) ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ವೃಶಿನಿ/ವಿಲೀನ. ಪ್ರಕ್ರಿಯೆ/ ಅ.ವಿ.ಬ/87/2015 ದಿನಾಂಕ: 03/03/2016.

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯದಲ್ಲಿನ ಪದವಿಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವುದಕ್ಕೆ ಸಂಬಂಧಿಸಿದಂತೆ, ಉಪಬಂಧ ಕಲ್ಪಿಸಿ ಅಧಿನಿಯಮ ಹೊರಡಿಸಲಾಗಿದೆ. ಸದರಿ ಅಧಿನಿಯಮದ 4ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗೆ ಪ್ರಕ್ರಿಯೆ ಪೂರ್ಣಗೊಳಿಸಲು ಅವಕಾಶ ಕಲ್ಪಿಸಲಾಗಿದ್ದು, ಸದರಿ ಅಧಿನಿಯಮದ ಅವಧಿಯು ದಿನಾಂಕ: 05–04–2012 ಕ್ಕೆ ಅಂತ್ಯಗೊಂಡಿರುತ್ತದೆ.

ಪ್ರಸ್ತುತ ಸರ್ಕಾರಿ ಸಂಸ್ಥೆ/ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಬೋಧಕ/ಬೋಧಕೇತರ ಸಿಬ್ಬಂದಿಯನ್ನು ವಿವಿಧ ಇಲಾಖೆಗಳಿಗೆ ನಿಯೋಜಿಸುವ ಸಂಬಂಧವಾಗಿ ದಿನಾಂಕ: 04–3–2012 ಹಾಗೂ 05–03–2012 ರಂದು ಕೌನ್ಸೆಲಿಂಗ್ ನಡೆಸಲಾಗಿರುತ್ತದೆ. ಆದರೆ ಖಾಸಗಿ ವಿಲೀನ ಪ್ರಕ್ರಿಯೆ ಸಮಿತಿಯ ಅಧ್ಯಕ್ಷರು ಸಲ್ಲಿಸಿರುವ ವರದಿಯಲ್ಲಿ ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅರೆಕಾಲಿಕ ಸಿಬ್ಬಂದಿಗಳನ್ನು ಅಧಿನಿಯಮದಂತೆ ವಿವಿಧ ಖಾಸಗಿ ಅನುದಾನಿತ ಸಂಸ್ಥೆಗೆ ನಿಯೋಜಿಸಲು ಹುದ್ದೆಗಳ ಕೊರತೆ ಉಂಟಾಗಿರುವುದರಿಂದ ಸದರಿ ಸಿಬ್ಬಂದಿಗಳನ್ನು ನಿಯೋಜಿಸಲು ವಿಳಂಬವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 06–04–2011ರ ಅಧಿಸೂಚನೆಯಲ್ಲಿ ಸೂಚಿಸಿರುವ ಕಾಲಮಿತಿಯನ್ನು ಮೇಲೆ (2) ರಿಂದ (6) ರಲ್ಲಿ ಓದಲಾದ ಆದೇಶಗಳಲ್ಲಿ ವಿಲೀನ ಪ್ರಕ್ರಿಯೆಯ ಕಾಲಾವಧಿಯನ್ನು ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ (7)ರಲ್ಲಿ ಓದಲಾದ ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಇವರ ದಿನಾಂಕ: 06–09–2015ರ ಪತ್ರದಲ್ಲಿ 1447 ಸಿಬ್ಬಂದಿಗಳ ವಿಲೀನ ಪ್ರಕ್ರಿಯೆಯು ಭಾಗಶಃ ಪೂರ್ಣಗೊಂಡಿದ್ದು ಬಾಕಿ ಉಳಿದಿರುವ ಅಂದಾಜು 150 ಸಿಬ್ಬಂದಿಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಲಭ್ಯವಾಗಿರುವ ಪ್ರಥಮ ದರ್ಜೆ ಸಹಾಯಕ, ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳಲ್ಲಿ ವಿಲೀನಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲು ಆರ್ಥಿಕ ಇಲಾಖೆಯ ಅನುಮೋದನೆ ಪಡೆಯಬೇಕಾಗಿರುವುದರಿಂದ ಸೆಪ್ಟೆಂಬರ್ 31ಕ್ಕೆ ಅಂತ್ಯಗೊಳ್ಳುತ್ತಿರುವ ವಿಧೇಯಕದ ಕಾರ್ಯನುಷ್ಠಾನ ಅವಧಿಯನ್ನು 06 ತಿಂಗಳು ವಿಸ್ತರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 117 ಟಿವಿಇ 2015, ಬೆಂಗಳೂರು, ದಿನಾಂಕ: 07–04.2016.**

2011ರ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮದ 4ನೇ ಪ್ರಕರಣದ 4ನೇ ಉಪ ಪ್ರಕರಣದ ಪ್ರಕಾರ ಬಾಕಿ ಉಳಿದಿರುವ ಜೆ.ಓ.ಸಿ. ಸಿಬ್ಬಂದಿಯನ್ನು ವಿಲೀನಗೊಳಿಸುವ ಪ್ರಕ್ರಿಯೆ ಪೂರ್ಣಗೊಳಿಸಬೇಕಾಗಿರುವುದರಿಂದ, ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ದಿನಾಂಕ: 01–04–2016 ರಿಂದ 31–09–2016ರವರೆಗೆ ಕಾಲಾವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

PR-310
SC-50

**ವಿ. ರಾಮಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ. (ಸಾಮಾನ್ಯ)

## ಕಂದಾಯ ಸಚಿವಾಲಯ

**ವಿಷಯ:** ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಅಣಕನೂರು ಗ್ರಾಮದ ಸ.ನಂ. 109ರಲ್ಲಿ 22–00 ಎಕರೆ ಸರ್ಕಾರಿ ಖರಾಬು ಜಮೀನನ್ನು ಸರ್ಕಾರಿ ಮೆಡಿಕಲ್ ಕಾಲೇಜು ಸ್ಥಾಪಿಸಲು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಆಕುಕ 306 ಎಂಐಎಸ್ 2014, ದಿನಾಂಕ: 05–08–2015.

2. ಜಿಲ್ಲಾಧಿಕಾರಿ ಚಿಕ್ಕಬಳ್ಳಾಪುರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್/322/2014–15, ದಿನಾಂಕ: 31–08–2015

**ಪ್ರಸ್ತಾವನೆ :–**

ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(1) ರಲ್ಲಿ ದಿನಾಂಕ: 07–06–2014ರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ವೈದ್ಯಕೀಯ ಕಾಲೇಜನ್ನು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಸಹಯೋಗದೊಂದಿಗೆ ಸ್ಥಾಪಿಸಲು ಸರ್ಕಾರವು ಉದ್ದೇಶಿಸಿರುವುದರಿಂದ 20–00 ಎಕರೆ ಸರ್ಕಾರಿ ಜಮೀನನ್ನು ಗುರುತಿಸಲು ಜಮೀನನ್ನು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2) ರಲ್ಲಿ ಜಿಲ್ಲಾಧಿಕಾರಿ ಚಿಕ್ಕಬಳ್ಳಾಪುರ ಇವರು ಜಿಲ್ಲಾ ಶಸ್ತ್ರಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಚಿಕ್ಕಬಳ್ಳಾಪುರ ರವರ ಕೋರಿಕೆಯಂತೆ, ಉಪವಿಭಾಗಾಧಿಕಾರಿಗಳು ಚಿಕ್ಕಬಳ್ಳಾಪುರ ಉಪವಿಭಾಗ ಹಾಗೂ ತಹಶೀಲ್ದಾರ್, ಚಿಕ್ಕಬಳ್ಳಾಪುರ ತಾಲ್ಲೂಕು ರವರುಗಳು ಸ್ಥಳ ಪರಿಶೀಲನೆ ನಡೆಸಿ ಗುರುತಿಸಿರುವ ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಅಣಕನೂರು ಗ್ರಾಮದ ಸ.ನಂ. 109 ರಲ್ಲಿ 22–00 ಎಕರೆ ಜಮೀನು ಸರ್ಕಾರಿ ಮೆಡಿಕಲ್ ಕಾಲೇಜು ಸ್ಥಾಪಿಸಲು ಸೂಕ್ತವಾದ ಜಮೀನಾಗಿರುತ್ತದೆ ಎಂಬುದಾಗಿ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಂದುವರೆದು, ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಚಿಕ್ಕಬಳ್ಳಾಪುರ ರವರು ಪ್ರಸ್ತಾವಿತ ವೈದ್ಯಕೀಯ ಸಂಸ್ಥೆ ಪ್ರಾರಂಭಿಸಲು ಭಾರತೀಯ ವೈದ್ಯಕೀಯ ಮಂಡಳಿಯ ನಿಯಮಾನುಸಾರ ವೈದ್ಯಕೀಯ ಸಂಸ್ಥೆಗೆ ಅವಶ್ಯವಿರುವ ಕನಿಷ್ಠ 20–00 ಎಕರೆ ಜಮೀನನ್ನು ಚಿಕ್ಕಬಳ್ಳಾಪುರದಿಂದ 10 ಕಿ.ಮೀ. ದೂರದ ಒಳಗೆ ಒದಗಿಸಬೇಕಾಗಿದ್ದು, ಅದರಂತೆ, ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಅಣಕನೂರು ಗ್ರಾಮದ ಸ.ನಂ. 109 ರಲ್ಲಿ ಈಗಾಗಲೇ ಬಟಾನಿಕಲ್ ಗಾರ್ಡನ್ ಸಲುವಾಗಿ ಮಂಜೂರಾಗಿರುವ 70–00 ಎಕರೆ ಪ್ರದೇಶದಲ್ಲಿ 20–00 ಎಕರೆ ಜಮೀನನ್ನು ಕಡಿತಗೊಳಿಸಿ ವೈದ್ಯಕೀಯ ಸಂಸ್ಥೆಯನ್ನು ಪ್ರಾರಂಭಿಸಲು 20–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮುಂದುವರೆದು, ಪ್ರಸ್ತಾಪಿತ ಜಮೀನನ್ನು ವೈದ್ಯಕೀಯ ಕಾಲೇಜು ಸ್ಥಾಪನೆಗಾಗಿ ವೈದ್ಯಕೀಯ ಶಿಕ್ಷಣ ಇಲಾಖೆಗೆ ಕಾಯ್ದಿರಿಸುವ ಬದಲು ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969 ರನ್ವಯ ಮಂಜೂರಾತಿ ನೀಡಬೇಕಾಗಿರುತ್ತದೆ. ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969ರ ನಿಯಮ 22ಎರ ಪ್ರಕಾರ ಸರ್ಕಾರಿ ಇಲಾಖೆಗಳಿಗೆ ಜಮೀನನ್ನು ಉಚಿತವಾಗಿ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 55 ಎಲ್‌ಜಿಕೆ 2015, ಬೆಂಗಳೂರು, ದಿನಾಂಕ: 25–02–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಅಣಕನೂರು ಗ್ರಾಮದ ಸ.ನಂ. 109 ರಲ್ಲಿ 22–00 ಎಕರೆ ವಿಸ್ತೀರ್ಣದ ಸರ್ಕಾರಿ ಖರಾಬು ಜಮೀನನ್ನು ಸರ್ಕಾರಿ ವೈದ್ಯಕೀಯ ಕಾಲೇಜು ಸ್ಥಾಪಿಸಲು ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969 ನಿಯಮ 22ಎ(3)(i)ರ ಪ್ರಕಾರ ಉಚಿತವಾಗಿ ವೈದ್ಯಕೀಯ ಶಿಕ್ಷಣ ಇಲಾಖೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ:–

1. ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ, ಅದೇ ಉದೇಶಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
6. ಮಂಜೂರಾದ ಜಮೀನು ಇಲಾಖೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
7. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
8. ಮಂಜೂರಾದ ಜಮೀನು 1969ರ ಭೂಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿಯು ತನ್ನಷ್ಟಕ್ಕೆ ತಾನೇ ರದ್ದಾಗುವುದು.

**P.R. 311**
**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎಲ್. ಮಹಾಂತೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–1)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಧನೇಶ್ ರಾವ್, ಪೊಲೀಸ್ ಅಧೀಕ್ಷಕರು ಮತ್ತು ಮುಖ್ಯ ಜಾಗೃತಾಧಿಕಾರಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಒಇ 598 ಪೊಸಿಪ 2014 (ಭಾ2) ದಿನಾಂಕ: 20–01–2015 ಮತ್ತು 12–03–2015.
2. ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ1/49/2014–15, ದಿನಾಂಕ: 24–07–2015 ಮತ್ತು 03–03–2016.

**ಪ್ರಸ್ತಾವನೆ :–**

ಶ್ರೀ ಧಾನೇಶ್‌ರಾವ್, ಸಹಾಯಕ ಪೊಲೀಸ್ ಆಯುಕ್ತರು, ಇವರಿಗೆ ಪೊಲೀಸ್ ಅಧೀಕ್ಷಕರು (ಸಿವಿಲ್) (ನಾನ್ ಐಪಿಎಸ್) ಹುದ್ದೆಗೆ ಮುಂಬಡ್ತಿ ನೀಡಿ ಪೊಲೀಸ್ ಅಧೀಕ್ಷಕರು, ಡಿ.ಸಿ.ಆರ್.ಇ. ಮಂಗಳೂರು ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿ ಹೊರಡಿಸಿದ ದಿನಾಂಕ: 20–01–2015ರ ಅಧಿಸೂಚನೆಯನ್ನು ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ: (1)ರ ದಿನಾಂಕ: 12–03–2015ರ ಅಧಿಸೂಚನೆ–2ರಲ್ಲಿ ಸದರಿಯವರನ್ನು ಪೊಲೀಸ್ ಅಧೀಕ್ಷಕರು ಮತ್ತು ಮುಖ್ಯ ಜಾಗೃತಾಧಿಕಾರಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರಗಳಲ್ಲಿ ಪೊಲೀಸ್ ಅಧೀಕ್ಷಕರು ಮತ್ತು ಮುಖ್ಯ ಜಾಗೃತಾಧಿಕಾರಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಹುದ್ದೆಗೆ ನೇಮಕ ಮಾಡಲಾದ ಶ್ರೀ ಎಸ್. ಧಾನೇಶ್‌ರಾವ್ ಇವರಿಗೆ ಸಂಬಂಧಿಸಿದಂತೆ ನಿಯೋಜನೆಯ ಷರತ್ತು ಮತ್ತು ನಿಬಂಧನೆಗಳನ್ನು ಒದಗಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

### ಸರ್ಕಾರದ ಆದೇಶ ಸಂಖ್ಯೆ: ಒಇ 38 ಪೊಸಿಪ 2016 ಬೆಂಗಳೂರು, ದಿನಾಂಕ: 11–04–2016

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್. ಧಾನೇಶ್‌ರಾವ್, ಪೊಲೀಸ್ ಅಧೀಕ್ಷಕರು ಮತ್ತು ಮುಖ್ಯ ಜಾಗೃತಾಧಿಕಾರಿ ಇವರಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ ದಲ್ಲಿ ವಿವರಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಆರ್‌ಪಿ 1996 ದಿನಾಂಕ: 10–07–1996ರ ಅನುಬಂಧದ ಐಟಂ–7ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಅಪರ ಮುಖ್ಯ ಕಾರ್ಯದರ್ಶಿ ಇವರಿಗೆ ನೀಡಲಾಗಿರುವ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ವೆಂಕಟೇಶ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

### ಸರ್ಕಾರದ ಆದೇಶ ಸಂಖ್ಯೆ: ಒಇ 38 ಪೊಸಿಪ 2016, ದಿನಾಂಕ: 11–04–2016ಕ್ಕೆ ಅನುಬಂಧ

ಕರ್ನಾಟಕ ಪೊಲೀಸ್ ಸೇವೆ "ಎ" ಶ್ರೇಣಿಯ ಪೊಲೀಸ್ ಅಧೀಕ್ಷಕರು (ನಾನ್ ಐಪಿಎಸ್) ಅಧಿಕಾರಿ ಹಾಗೂ ನಿಯೋಜನೆ ಮೇಲೆ ಪೊಲೀಸ್ ಅಧೀಕ್ಷಕರು & ಮುಖ್ಯ ಜಾಗೃತಾಧಿಕಾರಿ ಹುದ್ದೆಯಲ್ಲಿ (ಇಲ್ಲಿ ಇನ್ನು ಮುಂದೆ ನಿಯೋಜಕ ಎಂದು ಉಲ್ಲೇಖಿಸಲಾಗಿದೆ) ಸೇವೆ ಸಲ್ಲಿಸುತ್ತಿರುವ ಶ್ರೀ ಎಸ್. ಧನೇಶ್ ರಾವ್ ರವರ (ಇಲ್ಲಿ ಇನ್ನು ಮುಂದೆ ಅಧಿಕಾರಿ ಎಂದು ಉಲ್ಲೇಖಿಸಲಾಗುವುದು) ನಿಯೋಜನೆಯ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿದೆ.

1) **ನಿಯೋಜನೆ ಅವಧಿ:** ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ: 12–03–2015 ರಿಂದ ವರ್ಷ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

2) **ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:** ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರು ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು; ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

3) **ವೇತನ:** ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಅವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200 ರೂ. ಗಳ ಗರಿಷ್ಠ ಮಿತಿಗೊಳಪಟ್ಟು ಆ ವೇತನ ಶ್ರೇಣಿಯ ಸರಾಸರಿಯ ಶೇಕಡ 5ರ ದರದಲ್ಲಿ ಅನ್ಯ ಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

4) **ತುಟ್ಟಿಭತ್ಯೆ/ಮನೆಬಾಡಿಗೆ ಭತ್ಯೆ /ನಗರ ಪರಿಹಾರ ಭತ್ಯೆ:** ತುಟ್ಟಿಭತ್ಯೆ/ ಮನೆಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

5) **ಸೇರುವ ಕಾಲ, ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ:** ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ/ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

6) **ಪ್ರಯಾಣ ಭತ್ಯೆ:** ನಿಯೋಜನೆ ಮೇಲೆ ಅನ್ಯ ಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

7) **ರಜೆ ನಿಯಮಗಳು:** ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತಾರೆ.

8) **ರಜೆ ಪ್ರಯಾಣ ರಿಯಾಯಿತಿ:** ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

9) **ಗಳಿಕೆ ರಜೆ ನಗದೀಕರಣ:** ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 118ರ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

10) **ವೈದ್ಯಕೀಯ ರಿಯಾಯಿತಿಗಳು:–** 1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ) ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ಅನ್ಯ ನಿಯೋಜಕರೇ ಭರಿಸತಕ್ಕದ್ದು.

11) **ದುರ್ಬಲತೆ ರಜೆ:** ನಿಯೋಜಕರ ಬಳಿ ಸೇವೆಯಲ್ಲಿರುವಾಗ ಮತ್ತು/ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡು ಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯ ನಿಯೋಜಕರು ಬದ್ಧರಾಗಿರುತ್ತಾರೆ.

12) **ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:** (ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿಮಾಡತಕ್ಕದ್ದು.

| | |
|---|---|
| ರಜೆ ವೇತನ ಅಂಶದಾನ: | ಅನ್ಯ ಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ ಪಡೆಯುವ ಸಂಬಳದ ಶೇಕಡಾ 11 ರಷ್ಟು |
| ನಿವೃತ್ತಿ ವೇತನ ಅಂಶದಾನ: | ಕಾಲಕಾಲಕ್ಕೆ ಪಡೆಯುವ ವೇತನದ ಎಂಟನೇ ಒಂದು ಭಾಗ ಈ ಉದ್ದೇಶಕ್ಕೆ "ವೇತನ" ಎಂದರೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 37 ಎಸ್.ಆರ್.ಎಸ್ 87 ದಿನಾಂಕ 11–02–1988ರಲ್ಲಿ ವಿವರಿಸಲಾದ ವೇತನ ಎಂದು ಅರ್ಥ |

(ಆ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯ ಸೇವೆಯು ಮುಗಿದು ಹೋದಂದಿನಿಂದ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ಪಾವತಿ ಮಾಡತಕ್ಕದ್ದು, ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| (ಅ) ರಜೆ ವೇತನ | (1) ರಾಜ್ಯ ಸೇವೆಯ ಪ್ರಕರಣದಲ್ಲಿ | |
| | (ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಜಮೆ ಶೀರ್ಷಿಕೆ 800–ಇತರೆ ಜಮೆಗಳು –ರಜೆ ವೇತನದ ಅಂಶದಾನ |

| | |
|---|---|
| (ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೆ ಹೋದಲ್ಲಿ | |
| ಸಾಮಾನ್ಯ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು–800 ಇತರೆ ಜಮೆಗಳು–ರಜೆ ವೇತನ ಅಂಶದಾನ. |
| ಸಾಮಾಜಿಕ ಮತ್ತು ಸಾಮೂದಾಯಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0250. ಇತರೆ ಸಾಮಾಜಿಕ ಸೇವೆಗಳು 800. ಇತರೆ ಜಮೆಗಳು–ರಜೆ ವೇತನ ಅಂಶದಾನ. |
| ಆರ್ಥಿಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475. ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–800. ಇತರೆ ಜಮೆಗಳು– ರಜೆ ವೇತನ ಅಂಶದಾನ. |

| | |
|---|---|
| (ಆ) ನಿವೃತ್ತಿ ವೇತನ ಅಂಶದಾನ | 0071 ನಿವೃತ್ತಿ ವೇತನ ಮತ್ತು ಇತರೆ ನಿವೃತ್ತಿ ಸೌಲಭ್ಯಗಳ ಬಗ್ಗೆ ಅಂಶದಾನ ಮತ್ತು ವಸೂಲಿಗಳು–101 ಚಂದಾಗಳು ಮತ್ತು ಅಂಶ ದಾನಗಳು 03, ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06, ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಇ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿಮಾಡುವ ದಿನಾಂಕದವರೆಗೆ ಪ್ರತಿ 100 ₹. ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

13) **ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಗೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ–ಎ ದಲ್ಲಿನ ಅನುಸೂಚಿಯೊಂದಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–2) ಇವರ ಹೆಸರಿಗೆ ಕ್ರಾಸ್ ಮಾಡಿದ ಚೆಕ್/ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕಶೀರ್ಷಿಕೆಗೆ ಜಮೆ ಮಾಡಲು ಕಳುಹಿಸಿಕೊಡತಕ್ಕದ್ದು.

14) **ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ/ ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ:–** ಅನ್ಯ ಸೇವೆಯ ಮೇಲೆ ಪ್ರತಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ. ನಿಯಮಾವಳಿ/ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ./ಜಿ.ಪಿ.ಎಫ್. ನಲ್ಲಿ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | |
|---|---|
| ಸಾಮಾನ್ಯ ಭವಿಷ್ಯ ನಿಧಿ: | 8005. ರಾಜ್ಯ ಭವಿಷ್ಯ ನಿಧಿ |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ: | 8011. ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು |

15) **ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:–** ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದು ನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965 ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

16) **ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:** ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

17) **ಗೃಹ ನಿರ್ಮಾಣ ಮುಂಗಡ: ಗೃಹ ಖರೀದಿ ಮುಂಗಡ: ಗೃಹ ರಿಪೇರಿ ಮುಂಗಡ: ಮತ್ತು ವಾಹನ ಖರೀದಿ ಮುಂಗಡ:** ನಿಯೋಜಕರು ಪ್ರಸ್ತುತ ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

**ಬಿ. ವೆಂಕಟೇಶ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

PR-312

**ಕಂದಾಯ ಸಚಿವಾಲಯ**

**ವಿಷಯ:** ಯಾದಗಿರಿ ಜಿಲ್ಲೆ, ಶಹಾಪುರ ತಾಲ್ಲುಕಿನ ಹಿರೇವಡಗೇರಾ ಗ್ರಾಮದ ಸ.ನಂ. 7/ಆ ರಲ್ಲಿ 2–00 ಎಕರೆ ಸರ್ಕಾರಿ ಜಮೀನನ್ನು ಶ್ರೀ ಮೈಲಾರಲಿಂಗೇಶ್ವರ ವಿವಿಧೋದ್ದೇಶ ಸೇವಾ ಸಂಘ, ಹಿರೇವಡಗೇರಾ ಶಹಾಪುರ ತಾಲ್ಲೂಕು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂ/ಭೂಮಂ/09/2015–16, ದಿನಾಂಕ: 21–08–2015

**ಪ್ರಸ್ತಾವನೆ :–**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಯಾದಗಿರಿ ಇವರು ಯಾದಗಿರಿ ಜಿಲ್ಲೆ, ಶಹಾಪುರ ತಾಲ್ಲೂಕಿನ ವಡಗೇರಾ ಗ್ರಾಮದ ಸ.ನಂ. 7/ಆ ರಲ್ಲಿ 2–00 ಎಕರೆ ಜಮೀನನ್ನು ಶ್ರೀ ಮೈಲಾರಲಿಂಗೇಶ್ವರ ವಿವಿಧೋದ್ದೇಶ ಸೇವಾ ಸಂಘ, ಹಿರೇವಡಗೇರಾ ಶಹಾಪುರ ತಾಲ್ಲೂಕು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಕುರಿತು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶಹಾಪುರ ತಾಲ್ಲೂಕಿನ, ಹಿರೇವಡೆಗೇರಾ ಗ್ರಾಮದ ಸರ್ಕಾರಿ ಜಮೀನಿನ ಸ.ನಂ. 7/ಆ ರಲ್ಲಿ 16–07 ಎಕರೆ ಜಮೀನಿದ್ದು. ಭೂ ನ್ಯಾಯ ಮಂಡಳಿಯ ಆದೇಶದ ಪ್ರಕಾರ ಇದು ಹೆಚ್ಚುವರಿ ಜಮೀನಾಗಿದ್ದು, ಸರ್ಕಾರದ ವಶದಲ್ಲಿರುತ್ತದೆ. ಈ ಜಮೀನಿನ ಪೈಕಿ 5–00 ಎಕರೆ ಜಮೀನನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರಿಗೆ ಹಾಗೂ 0–20 ಗುಂಟೆ ಜಮೀನನ್ನು ಪರಿಶಿಷ್ಟ ಜಾತಿ ಜನಾಂಗದವರಿಗೆ ರುದ್ರಭೂಮಿಗೆ ಮಂಜೂರು ಮಾಡಲಾಗಿರುತ್ತದೆ. ಉಳಿದ 10–27 ಎಕರೆ ಜಮೀನಿನ ಪಹಣಿ ಕಲಂ 9ರಲ್ಲಿ "ಕರ್ನಾಟಕ ಸರ್ಕಾರ" ಎಂದು ದಾಖಲಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಶ್ರೀ ಮೈಲಾರಲಿಂಗೇಶ್ವರ ವಿವಿಧೋದ್ದೇಶ ಹಿರೇವಡೆಗೆರೆ ಸಂಸ್ಥೆಯು ಒಂದು ಖಾಸಗಿ ಸಂಸ್ಥೆಯಾಗಿದ್ದು, ದಿನಾಂಕ: 16–11–2009 ರಂದು ನೋಂದಣಿಯಾಗಿರುತ್ತದೆ. ಸದರಿ ಸಂಸ್ಥೆಯು ಪ್ರಾರಂಭವಾದಾಗಿನಿಂದ, ಅಂದರೆ ದಿ. 16–11–2009ರಿಂದ ದಿ. 31–03–2015 ರವರೆಗೆ ಆಡಿಟ್ ವರದಿಗಳನ್ನು ಸಲ್ಲಿಸಿರುತ್ತಾರೆ. ಹಿರೇವಡಗೇರಾ ಗ್ರಾಮದ ಪ್ರದೇಶದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗದ ಸಮಾಜದವರು ಬಹು ಸಂಖ್ಯೆಯಲ್ಲಿದ್ದು, ಅವರ ಅಭಿವೃದ್ಧಿಗಾಗಿ ಹಾಗೂ ಶೈಕ್ಷಣಿಕ ಏಳಿಗೆಗಾಗಿ ಶ್ರಮಿಸಲು ಕಂಕಣಬದ್ಧವಾಗಿರುವುದಾಗಿ ಸಂಸ್ಥೆಯು ತಿಳಿಸಿದೆ. ಈ ಸಂಸ್ಥೆಯ ಆಶ್ರಯದಲ್ಲಿ 2014–15ನೇ ಸಾಲಿನಲ್ಲಿ ಸರ್ಕಾರದ ವತಿಯಿಂದ ಶ್ರೀ ಬಲಭೀಮ ಸೇನಾ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ವಸತಿ ನಿಲಯವನ್ನು ಸಹ ಮಂಜೂರು ಮಾಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 30 ಎಲ್‌ಜಿಜಿ 2015, ಬೆಂಗಳೂರು, ದಿನಾಂಕ: 30–03–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಯಾದಗಿರಿ ಜಿಲ್ಲೆ, ಶಹಾಪುರ ತಾಲ್ಲೂಕಿನ ಹಿರೇವಡಗೇರಾ ಗ್ರಾಮದ ಸ.ನಂ. 7/ಆ ರಲ್ಲಿ 2–00 ಎಕರೆ ಸರ್ಕಾರಿ ಜಮೀನನ್ನು ಶ್ರೀ ಮೈಲಾರಲಿಂಗೇಶ್ವರ ವಿವಿಧೋದ್ದೇಶ ಸೇವಾ ಸಂಘ, ಹಿರೇವಡಗೇರಾ ಶಹಾಪುರ ತಾಲ್ಲೂಕು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22ಎ ರನ್ವಯ ಪ್ರಚಲಿತ ಮಾರುಕಟ್ಟೆ ಬೆಲೆ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:**

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
5. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
6. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರೇವಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 313**
**S.C. 25**

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಟಿ.ಪಿ ಮಂಜುನಾಥ್, ಸೈನಿಕರು ಇವರಿಗೆ ಸೈನಿಕ ಕೋಟಾದಡಿ ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ, ಹೆಸಗೋಡು ಗ್ರಾಮದ ಸ.ನಂ. 203ರಲ್ಲಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ(2)ಸಿಆರ್: 38/2013–14, ದಿನಾಂಕ: 24–03–2015.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 9393/2013 (ಜಿಎಂ–ಆರ್‌ಇಎಸ್)ರ ಆದೇಶ ದಿನಾಂಕ: 09–07–2013.
3. ಶ್ರೀ ಟಿ.ಪಿ. ಮಂಜುನಾಥ್, ಸೈನಿಕರು ಇವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ನ್ಯಾಯಾಂಗ ನಿಂದನಾ ಅರ್ಜಿ ಸಂಖ್ಯೆ: 209/2015 ಮತ್ತು 160/2016.

**ಪ್ರಸ್ತಾವನೆ :–**

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಟಿ.ಪಿ. ಮಂಜುನಾಥ್, ಸೈನಿಕರು ಇವರಿಗೆ ಸೈನಿಕ ಕೋಟಾದಡಿ ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ, ಹೆಸಗೋಡು ಗ್ರಾಮದ ಸ.ನಂ. 203ರಲ್ಲಿ 10–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಂದುವರೆದು, ಈ ಹಿಂದೆ ಸೈನಿಕ/ಮಾಜಿ ಸೈನಿಕರಿಗೆ ಜಮೀನು ಮಂಜೂರು ಮಾಡುವ ಬಗ್ಗೆ ಭೂ ಲಭ್ಯತಾ ಪಟ್ಟಿಯಲ್ಲಿ ಜಮೀನು ಲಭ್ಯವಿಲ್ಲದ ಪ್ರಯುಕ್ತ ಸದರಿ ಪ್ರಸ್ತಾವನೆಯನ್ನು ದಿನಾಂಕ: 29–07–2010ರ ಪತ್ರದಲ್ಲಿ ತಿರಸ್ಕರಿಸಲಾಗಿತ್ತು. ಈ ಆದೇಶದ ವಿರುದ್ಧ ಸೈನಿಕರಾದ ಶ್ರೀ ಟಿ.ಪಿ. ಮಂಜುನಾಥ್ ಬಿನ್ ಪರಮೇಶ್ವರ್ ಇವರು ಮಾನ್ಯ ಉಚ್ಚ ನ್ಯಾಯಾಲಯಲ್ಲಿ ರಿಟ್ ಅರ್ಜಿ ಸಂ. 9393/2013 ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 09–07–2013ರ ತೀರ್ಪಿನಲ್ಲಿ ಅರ್ಜಿದಾರರಿಗೆ ಜಮೀನು ಮಂಜೂರಾತಿಗೆ ಸಂಬಂಧಿಸಿದಂತೆ 5 ತಿಂಗಳ ಒಳಗಾಗಿ ಅರ್ಜಿದಾರರ ಕೋರಿಕೆ ಬಗ್ಗೆ ನಿಯಮಾನುಸಾರ ಪರಿಶೀಲಿಸಿ ಕ್ರಮ ವಹಿಸಲು ಆದೇಶಿಸಿದೆ. ನ್ಯಾಯಾಲಯದ ಆದೇಶದಂತೆ ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ರವರು ಶ್ರೀ ಟಿ.ಪಿ. ಮಂಜುನಾಥ್ ಬಿನ್ ಟಿ.ಎಸ್. ಪರಮೇಶ್ವರ, ಸೈನಿಕರು ಇವರಿಗೆ ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ಬಾಣಕಲ್ ಹೋಬಳಿ, ಹೆಸಗೋಡು ಗ್ರಾಮದ ಸ.ನಂ. 203 ರಲ್ಲಿ 10 ಎಕರೆ ಗೋಮಾಳ ಜಮೀನನ್ನು ಗೋಮಾಳ ಲೆಕ್ಕಶೀರ್ಷಿಕೆಯಿಂದ ತಗ್ಗಿಸಿಕೊಂಡು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 12(5)ರ ರನ್ವಯ ಮಂಜೂರು ಮಾಡುವಂತೆ ಹಾಗೂ ಸದರಿ ಗ್ರಾಮದಲ್ಲಿ ಅವಶ್ಯಕತೆಗಿಂತ ಹೆಚ್ಚಿನ ಗೋಮಾಳ ಜಮೀನು ಲಭ್ಯವಿರುವುದಾಗಿ ತಿಳಿಸಿ, ಜಮೀನು ಮಂಜೂರು ಮಾಡುವಂತೆ ಪ್ರಾದೇಶಿಕ ಆಯುಕ್ತರು, ಮೈಸೂರು ರವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಮಧ್ಯೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಶ್ರೀ ಟಿ.ಪಿ. ಮಂಜುನಾಥ್, ಸೈನಿಕರು ಇವರು ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ: 9393/2013ರ ದಿನಾಂಕ: 09–07–2013ರ ತೀರ್ಪಿನನ್ವಯ ಕ್ರಮ ಕೈಗೊಂಡಿರುವುದಿಲ್ಲವೆಂದು ಉಚ್ಚ ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂಖ್ಯೆ: 209/2015 ದಾಖಲಿಸಿದ್ದು, ಅದರಲ್ಲಿ ನಿಂದನಾ ದಾವೆ ಸಂಖ್ಯೆ 209/2015 ಯು ದಿನಾಂಕ: 30–03–2015ರಂದು ತೀರ್ಮಾನವಾಗಿದ್ದು, ಆದೇಶ ಭಾಗದ ಕಂಡಿಕೆ–6ರ ಉದ್ಧೃತ ಭಾಗ ಈ ಕೆಳಕಂಡಂತಿದೆ:–

This contempt petition is disposed off, reserving liberty to the 24/3/2015 vide Annexure-R1 passed by Accused No.2 before the appropriate Authority, if he is not satisfied with the order passed by the accused or need arises.

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ: 24–03–2015ರ ಪ್ರಸ್ತಾವನೆಯಂತೆ ಜಮೀನು ಮಂಜೂರು ಮಾಡಿರುವುದಿಲ್ಲವೆಂದು ಅರ್ಜಿದಾರರಾದ ಶ್ರೀ ಟಿ.ಪಿ. ಮಂಜುನಾಥ್ ಬಿನ್ ಟಿ.ಎಸ್. ಪರಮೇಶ್ವರ್ ಇವರು ಪುನಃ ನಿಂದನಾ ದಾವೆ ಸಂಖ್ಯೆ: 160/2016ನ್ನು ದಾಖಲಿಸಿರುತ್ತಾರೆ. ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪನ್ನು ಅನುಷ್ಠಾನಗೊಳಿಸಬೇಕಾಗಿರುವುದರಿಂದ ಮತ್ತು ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಶಿಫಾರಸ್ಸು ಮಾಡಿರುವಂತೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 12(5)ರಲ್ಲಿ 2 ಹೆಕ್ಟೇರ್ ಖುಷ್ಕಿ ಅಥವಾ 1 ಹೆಕ್ಟೇರ್ ತರಿ ಭೂಮಿಯನ್ನು (1 ಹೆಕ್ಟೇರ್ = 2.19 ಎಕರೆ) ಸೈನಿಕ/ಮಾಜಿ ಸೈನಿಕರಿಗೆ ಉಚಿತವಾಗಿ ಮಂಜೂರು ಮಾಡಲು ಅವಕಾಶವಿರುತ್ತದೆ ಹಾಗೂ ಹೆಸಗೋಡು ಗ್ರಾಮದಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಗೋಮಾಳ ಜಮೀನು ಲಭ್ಯವಿರುವುದರಿಂದ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 23 ಎಲ್‌ಜಿಯು 2015, ದಿನಾಂಕ: 07–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 12(5) ರನ್ವಯ ಶ್ರೀ ಟಿ.ಪಿ. ಮಂಜುನಾಥ್ ಬಿನ್ ಟಿ.ಎಸ್. ಪರಮೇಶ್ವರ, ಸೈನಿಕರು ಇವರಿಗೆ ಸೈನಿಕರ ಕೋಟಾದಡಿ ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ, ಹೆಸಗೋಡು ಗ್ರಾಮದ ಸ.ನಂ. 203 ರಲ್ಲಿ 5–00 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ವ್ಯವಸಾಯ ಉದ್ದೇಶಕ್ಕಾಗಿ ಉಪಯೋಗಿಸುವ ಷರತ್ತು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

ಸಾಗುವಳಿ ಚೀಟಿ ನೀಡುವ ಸಂದರ್ಭದಲ್ಲಿ ಭೂ ಮಂಜೂರಾತಿಗೆ ಸಂಬಂಧಿಸಿದ ಇತರೆ ಷರತ್ತುಗಳನ್ನು ವಿಧಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–2)

**P.R. 314**
**S.C. 25**

## LAW SECRETARIAT

**Sub:** Increasing the number of Judges/Courts in Subordinate Judiciary to double the present number over a period of 5 years, as per the recommendation of the Advisory Council of National Mission headed by the Hon'ble Minister of Law and Justice (Department of Justice), New Delhi – reg.

**Read:** 1) Letter No. GOB.II.236/2012, dated: 20.10.2014, 03.11.2014, 12.03.2015 and 08.04.2015 from the Registrar General, High Court of Karnataka, Bengaluru.

2) Government Order No. LAW 137 LCE 2014, dated: 26.03.2015.

**Preamble:**

The Registrar General, High Court of Karnataka, Bengaluru in the proposal dated: 20.10.2014 has stated that considering the resolutions of the Advisory Council of the National Mission for Justice Delivery and Legal Reforms, the directions of Hon'ble Supreme Court of India in Criminal Appeal No.(s). 254-262/2012 in the case of Imtiaz Ahmad Vs. State of U.P. and Ors., dated 01.05.2014, the recommendations of Law Commission of India, the letter of Hon'ble Chief Justice of India, dated: 26.02.2013 for doubling the Judges/Courts over a period of 5 years and the fact that the 39 Fast Track Courts which were functioning with the grants under the 13th Finance Commission being abolished by the end of 31.03.2015, and taking into consideration the pendency of cases before the Sub-Ordinate Courts, Accessibility, Jurisdiction and Geographical Conditions, Hon'ble High Court of Karnataka has resolved to establish in all 205 Courts i.e., 48 District and Sessions Courts, 67 Senior/Addl. Senior Civil Judges and J.M.F.C. Courts and 90 Civil Judge and J.M.F.C. Courts in the State and requested to accord sanction/approval of the Government for the following :

(i) For establishment of the 205 courts and to fill up the post of Presiding Officer and Staff for each court;

(ii) For purchase of articles of furniture, typewriters, telephone, Xerox machines, stationery and computer etc., for the use of the above said courts as per the standard scale and to issue instructions to the Director of Printing, Stationery and Publications, Government Press, Bengaluru, for supply of requisite quota of stationery articles, court seals and forms, registers and Karnataka Gazette for the use of the above courts;

(iii) For shifting of the posts of Bailiffs and Process Servers from the concerned Civil Judge and JMFC Courts to the 24 independent Senior Civil Judge and JMFC Courts in addition to the Process Staff to be sanctioned to the said newly established Courts; and

(iv) For making budgetary provisions for the establishment of these new courts.

In view of closure of 39 Fast Track Courts w.e.f. 31.03.2015 (which were funded out of 13th Finance Commission Grants), the Government having taken in to consideration the urgent need to continue the process in pending cases in these Courts as well as in other Courts has accorded sanction for establishment of 60 new courts in the State w.e.f. 01-04.2015 vide orders read at (2) above, as part of the proposal of 205 Courts to be established.

The proposal in totality has been examined and hence the following order.

**GOVERNMENT ORDER NO. LAW 137 LCE 2014, BENGALURU, DATED: 28.03.2016.**

Under the circumstances explained in the preamble, the Government are pleased to accord sanction for establishment of 205 Courts (including 60 Courts already established w.e.f. 01.04.2015 vide Government Order No.LAW 137 LCE 2014, dated: 26.03.2015) as in **ANNEXURE-I** appended to this order.

2. Sanction is also accorded for purchase of articles of furniture, typewriters, telephone, Xerox machines, stationery and computer etc., for the use of the above said courts as per the standard scale and to issue instructions to the Director of Printing, Stationery and Publications, Government Press, Bengaluru, for supply of requisite quota of stationery articles,court seals and forms, registers and Karnataka Gazette for the use of the above said Court.

3. Approval is also accorded for shifting of the posts of Bailiffs and Process Servers from the concerned Civil Judge and J.M.F.C. Courts to the 24 independent Senior Civil Judge and J.M.F.C. Courts in addition to the Process staff to be sanctioned to the said newely established Courts.

4. Sanction is also accorded to create in all 1,765 posts in various cadres to these 205 Courts. Details of the posts sanctioned to each courts are as mentioned in **ANNEXURE-II** appended to this order.

5. The expenditure regarding these 205 Courts shall be debited to the Head of Account as mentioned below:-

| Sl. No. | Courts | No. of Courts | Head of Account |
|---|---|---|---|
| 1 | Additional District & Sessions Courts (Other than District Headquarters) | 11 | |
| 2 | Senior Civil Judge and J.M.F.C. Courts | 24 | |

| Sl. No. | Courts | No. of Courts | Head of Account |
|---|---|---|---|
| 3 | Additional City Civil & Sessions Courts (Other than District Headquarters) | 21 | "2014-00-105-0-01 Civil and Session Courts" |
| 4 | Additional Civil and Sessions Courts (District Headquarters) | 16 | |
| 5 | Additional Senior Civil Judge and J.M.F.C. Courts | 32 | |
| 6 | Additional Senior Civil Judge and J.M.F.C. Courts | 85 | |

| Sl. No. | Courts | No. of Courts | Head of Account |
|---|---|---|---|
| 1 | Additional Chief Metropolitan Magistrate Courts | 11 | "2014-00-108-0-01 Criminal Courts" |
| 2 | J.M.F.C. Courts | 5 | |

6. This order is issued with the Concurrence of Finance Department vide its U.O. Note (Endorsement) No. FD 50 Exp. 10/2016, dated: 14.03.2016 and FD 79 Exp. 10/2016, dated 21.03.2016.

By Order and in the name of the Governor of Karnataka

**S. UMESHA**

Under Secretary to Government (Admn.-I),

Law Department.

**ANNEXURE - I**

**(Government Order No. LAW 137 LCE 2014, dated: 28.03.2016)**

**DETAILS OF COURTS TO BE ESTABLISHED**

**(Including 60 Courts sanctioned in Government Order No. LAW 137 LCE 2014, dated: 26.03.2015)**

**ADDL. CITY CIVIL AND SESSIONS COURT, BENGALURU CITY**

| Sl. No. | Name of the Court |
|---|---|
| 1 | LV Addl. To LXX Addl. City Civil & Sessions Judge, Bengaluru – **16 Courts** |
| 2 | LXXI Addl. To LXXV Addl. City Civil & Sessions Judge, Bengaluru – **5 Courts** |

**ADDL. DISTRICT & SESSIONS COURT TO BE ESTABLISHED IN DEFFERENT DISTRICTS TO SIT AT SUB-DIVISIONAL/TALUK HEADQUARTERS**

| Sl. No. | Name of the Court |
|---|---|
| 1 | I Addl. District & Sessions Judge, Bagalkot (to sit at Jamkhandi) |
| 2 | XII Addl. District & Sessions Judge, Belagavi (to sit at Gokak) |
| 3 | II Addl. District & Sessions Judge, Bidar (to sit at Basavakalyan)) |
| 4 | Addl. District & Sessions Judge, Chamarajnagar (to sit at Kollegal) |
| 5 | III Addl. District & Sessions Judge, Chikballapur (to sit at Chintamani) |
| 6 | V Addl. District & Sessions Judge, Dharwad (to sit at Hubballi) |
| 7 | III Addl. District & Sessions Judge, Kolar (to sit at KGF) |
| 8 | VIII Addl. District & Sessions Judge, Mysuru (to sit at Hunsur) |
| 9 | IV Addl. District & Sessions Judge, Shivamogga (to sit at Bhadravathi) |
| 10 | V Addl. District & Sessions Judge, Shivamogga (to sit at Sagar) |
| 11 | I Addl. District & Sessions Judge, Uttara Kannada (to sit at Sirsi) |

**ADDITIONAL DISTRICT & SESSIONS COURTS**

| Sl. No. | Name of the Court |
|---|---|
| 1 | VII Addl. District & Sessions Judge, Bengaluru Rural District |
| 2 | VIII Addl. District & Sessions Judge, Bengaluru Rural District |
| 3 | IX Addl. District & Sessions Judge, Bengaluru Rural District |
| 4 | II Addl. District & Sessions Judge, Bagalkot |
| 5 | IX Addl. District & Sessions Judge, Belagavi |
| 6 | X Addl. District & Sessions Judge, Belagavi |
| 7 | XI Addl. District & Sessions Judge, Belagavi |
| 8 | IV Addl. District & Sessions Judge, Vijayapura |
| 9 | II Addl. District & Sessions Judge, Chikballapur |
| 10 | IV Addl. District & Sessions Judge, Dharwad |
| 11 | III Addl. District & Sessions Judge, Hassan |
| 12 | IV Addl. District & Sessions Judge, Hassan |
| 13 | V Addl. District & Sessions Judge, Hassan |
| 14 | V Addl. District & Sessions Judge, Mandya |
| 15 | III Addl. District & Sessions Judge, Shivamogga |
| 16 | VI Addl. District & Sessions Judge, Tumakuru |

**ADDITIONAL CHIEF METROPOLITAN MAGISTRATE COURTS**

**Addl. Chief Metropolitan Magistrate Court at Bengaluru City: 11 Courts**

**SENIOR CIVIL JUDGE & JMFC COURTS**

| Sl. No. | Name of the Court |
|---|---|
| 1 | Senior Civil Judge & JMFC, Banahatti |
| 2 | Senior Civil Judge & JMFC, Hagaribommanahalli |
| 3 | Senior Civil Judge & JMFC, Aurad |
| 4 | Senior Civil Judge & JMFC, Siddlaghatta |
| 5 | Senior Civil Judge & JMFC, Gowribidannur |
| 6 | Senior Civil Judge & JMFC, Gundlupet |
| 7 | Senior Civil Judge & JMFC, Mudigere |
| 8 | Senior Civil Judge & JMFC, Koppa |
| 9 | Senior Civil Judge & JMFC, Hosadurga |
| 10 | Senior Civil Judge & JMFC, Kalghatgi |
| 11 | Senior Civil Judge & JMFC, Kundgol |
| 12 | Senior Civil Judge & JMFC, Sullia |
| 13 | Senior Civil Judge & JMFC, Laxmeshwar |
| 14 | Senior Civil Judge & JMFC, Afzalpur |
| 15 | Senior Civil Judge & JMFC, Jewargi |
| 16 | Senior Civil Judge & JMFC, Byadagi |
| 17 | Senior Civil Judge & JMFC, HD Kote |
| 18 | Senior Civil Judge & JMFC, Shikaripur |
| 19 | Senior Civil Judge & JMFC, Chikkanayakanahalli |
| 20 | Senior Civil Judge & JMFC, Pavagada |
| 21 | Senior Civil Judge & JMFC, Ankola |

| Sl. No. | Name of the Court |
|---|---|
| 22 | Senior Civil Judge & JMFC, Bhatkal |
| 23 | Senior Civil Judge & JMFC, Haliyal |
| 24 | Senior Civil Judge & JMFC, Shahapur |

**ADDITIONAL SENIOR CIVIL JUDGES AND JMFC COURTS**

| Sl. No. | Name of the Court |
|---|---|
| 1 | VII Addl. Senior Civil Judge & JMFC, Bengaluru Rural District |
| 2 | VIII Addl. Senior Civil Judge & JMFC, Bengaluru Rural District |
| 3 | III Addl. Senior Civil Judge & JMFC, Anekal |
| 4 | IV Addl. Senior Civil Judge & JMFC, Anekal |
| 5 | V Addl. Senior Civil Judge & JMFC, Anekal |
| 6 | II Addl. Senior Civil Judge & JMFC, Devanahalli |
| 7 | III Addl. Senior Civil Judge & JMFC, Devanahalli |
| 8 | II Addl. Senior Civil Judge & JMFC, Nelamangala |
| 9 | Addl. Senior Civil Judge & JMFC, Doddaballapura |
| 10 | Addl. Senior Civil Judge & JMFC, Mudhol |
| 11 | IV Addl. Senior Civil Judge & JMFC, Belagavi |
| 12 | IV Addl. Senior Civil Judge & JMFC, Vijayapura |
| 13 | Addl. Senior Civil Judge & JMFC, Sindagi |
| 14 | Addl. Senior Civil Judge & JMFC, Basavanabagewadi |
| 15 | II Addl. Senior Civil Judge & JMFC, Bidar |
| 16 | II Addl. Senior Civil Judge & JMFC, Chikballapura |
| 17 | Addl. Senior Civil Judge & JMFC, Chamarajnagar |
| 18 | IV Addl. Senior Civil Judge & JMFC, Kalaburagi |
| 19 | Addl. Senior Civil Judge & JMFC, Channarayapatna |
| 20 | III Addl. Senior Civil Judge & JMFC, Ranebennur |
| 21 | Addl. Senior Civil Judge & JMFC, Hangal |
| 22 | II Addl. Senior Civil Judge & JMFC, KR Pet |
| 23 | Addl. Senior Civil Judge & JMFC, Nagamangala |
| 24 | Addl. Senior Civil Judge & JMFC, Maddur |
| 25 | Addl. Senior Civil Judge & JMFC, Pandavapura |
| 26 | VII Addl. Senior Civil Judge & JMFC, Mysuru |
| 27 | III Addl. Senior Civil Judge & JMFC, Raichur |
| 28 | II Addl. Senior Civil Judge & JMFC, Ramanagara |
| 29 | Addl. Senior Civil Judge & JMFC, Magadi |
| 30 | Addl. Senior Civil Judge & JMFC, Kunigal |
| 31 | Addl. Senior Civil Judge & JMFC, Gubbi |
| 32 | II Addl. Senior Civil Judge & JMFC, Udupi |

**ADDITIONAL CIVIL JUDGE AND JMFC COURTS**

| Sl. No. | Name of the Court |
|---|---|
| | **BENGALURU RURAL DISTRICT** |
| 1 | II Addl. Civil Judge and JMFC, Doddaballapur |
| 2 | III Addl. Civil Judge and JMFC, Doddaballapur |
| 3 | IV Addl. Civil Judge and JMFC, Anekal |
| 4 | V Addl. Civil Judge and JMFC, Anekal |
| 5 | VI Addl. Civil Judge and JMFC, Anekal |
| 6 | III Addl. Civil Judge and JMFC, Devanahalli |
| 7 | IV Addl. Civil Judge and JMFC, Devanahalli |
| 8 | V Addl. Civil Judge & JMFC, Devanahalli |
| 9 | III Addl. Civil Judge & JMFC, Nelamangala |
| 10 | IV Addl. Civil Judge & JMFC, Nelamangala |
| 11 | V Addl. Civil Judge & JMFC, Nelamangala |
| 12 | II Addl. Civil Judge & JMFC, Hoskote |
| | **BELAGAVI DISTRICT** |
| 13 | VI Addl. Civil Judge & JMFC, Belagavi |
| 14 | VII Addl. Civil Judge & JMFC, Belagavi |
| 15 | VIII Addl. Civil Judge & JMFC, Belagavi |
| 16 | IX Addl. Civil Judge & JMFC, Belagavi |
| 17 | X Addl. Civil Judge & JMFC, Belagavi |
| 18 | IV Addl. Civil Judge & JMFC, Athani |
| 19 | V Addl. Civil Judge & JMFC, Athani |
| 20 | II Addl. Civil Judge & JMFC, Gokak |
| 21 | III Addl. Civil Judge & JMFC, Gokak |
| 22 | II Addl. Civil Judge & JMFC, Saundatti |
| | **BALLARI DISTRICT** |
| 23 | IV Addl. Civil Judge & JMFC, Ballari |
| 24 | V Addl. Civil Judge & JMFC, Ballari |
| 25 | II Addl. Civil Judge & JMFC, Hosapete |
| 26 | III Addl. Civil Judge & JMFC, Hosapete |
| | **BIDAR DISTRICT** |
| 27 | Addl. Civil Judge & JMFC, Basavakalyan |
| | **VIJAYAPURA DISTRICT** |
| 28 | V Addl. Civil Judge & JMFC – IV Court, Vijayapura |
| 29 | Addl. Civil Judge & JMFC, Basavanabagewadi |
| | **D.K.- MANGALURU DISTRICT** |
| 30 | II Addl. Civil Judge & JMFC, Puttur |
| | **DHARWAD DISTRICT** |
| 31 | V Addl. Civil Judge & JMFC, Hubballi |
| | **DAVANAGERE DISTRICT** |
| 32 | II Addl. Civil Judge & JMFC, Harihar |
| 33 | II Addl. Civil Judge & JMFC, Channagiri |
| | **HASSAN DISTRICT** |
| 34 | VI Addl. Civil Judge & JMFC, Hassan |

| Sl. No. | Name of the Court |
|---|---|
| 35 | VII Addl. Civil Judge & JMFC, Hassan |
| 36 | III Addl. Civil Judge & JMFC, Channarayapatna |
| 37 | II Addl. Civil Judge & JMFC, Arkalgud |
| 38 | Addl. Civil Judge & JMFC, Sakaleshpur |
| **KOLAR DISTRICT** | |
| 39 | III Addl. Civil Judge, Kolar |
| 40 | IV Addl. Civil Judge, Kolar |
| 41 | II Addl. Civil Judge & JMFC, KGF |
| 42 | II Addl. Civil Judge & JMFC, Bangarpet |
| 43 | III Addl. Civil Judge & JMFC, Malur |
| **KOPPAL DISTRICT** | |
| 44 | Addl. Civil Judge & JMFC, Koppal |
| 45 | Addl. Civil Judge & JMFC, Kushtagi |
| **MANDYA DISTRICT** | |
| 46 | III Addl. Civil Judge & JMFC, Mandya |
| 47 | IV Addl. Civil Judge & JMFC, Mandya |
| 48 | II Addl. Civil Judge & JMFC, K.R. Pet |
| 49 | III Addl. Civil Judge & JMFC, Maddur |
| 50 | IV Addl. Civil Judge & JMFC, Maddur |
| 51 | V Addl. Civil Judge & JMFC, Maddur |
| 52 | II Addl. Civil Judge & JMFC, Pandavapura |
| 53 | III Addl. Civil Judge & JMFC, Pandavapura |
| **MYSURU DISTRICT** | |
| 54 | VIII Addl. Civil Judge & JMFC, Mysuru |
| 55 | IX Addl. Civil Judge & JMFC, Mysuru |
| 56 | X Addl. Civil Judge & JMFC, Mysuru |
| 57 | XI Addl. Civil Judge & JMFC, Mysuru |
| 58 | XII Addl. Civil Judge & JMFC, Mysuru |
| 59 | XIII Addl. Civil Judge & JMFC, Mysuru |
| 60 | XIV Addl. Civil Judge & JMFC, Mysuru |
| 61 | XV Addl. Civil Judge & JMFC, Mysuru` |
| 62 | III Addl. Civil Judge & JMFC, Nanjangud |
| 63 | IV Addl. Civil Judge & JMFC, Nanjangud |
| 64 | Addl. Civil Judge & JMFC, Periyapatna |
| 65 | II Addl. Civil Judge & JMFC, H.D. Kote |
| 66 | III Addl. Civil Judge & JMFC, H.D. Kote |
| **RAICHUR DISTRICT** | |
| 67 | II Addl. Civil Judge & JMFC, Sindhanur |
| **RAMANAGARA DISTRICT** | |
| 68 | II Addl. Civil Judge & JMFC, Ramanagara |
| 69 | III Addl. Civil Judge & JMFC, Ramanagara |
| 70 | III Addl. Civil Judge & JMFC, Kanakapura |
| 71 | IV Addl. Civil Judge & JMFC, Kanakapura |

| Sl. No. | Name of the Court |
|---|---|
| | **SHIVAMOGGA DISTRICT** |
| 72 | V Addl. Civil Judge & JMFC, Shivamogga |
| 73 | II Addl. Civil Judge & JMFC, Shikaripura |
| 74 | Addl. Civil Judge & JMFC, Sorab |
| | **TUMAKURU DISTRICT** |
| 75 | VI Addl. Civil Judge & JMFC – VII Court, Tumakuru |
| 76 | VII Addl. Civil Judge & JMFC – VIII Court, Tumakuru |
| 77 | VIII Addl. Civil Judge & JMFC – IX Court, Tumakuru |
| 78 | IX Addl. Civil Judge & JMFC – X Court, Tumakuru |
| | **U.K. - KARWAR DISTRICT** |
| 79 | Addl. Civil Judge & JMFC, Ankola |
| 80 | II Addl. Civil Judge & JMFC, Sirsi |
| | **UDUPI DISTRICT** |
| 81 | IV Addl. Civil Judge & JMFC, Udupi |
| 82 | III Addl. Civil Judge & JMFC, Kundapura |
| 83 | IV Addl. Civil Judge & JMFC, Kundapura |
| | **YADGIR DISTRICT** |
| 84 | Addl. Civil Judge & JMFC, Yadgir |
| 85 | Addl. Civil Judge & JMFC, Shorapur |

**JMFC COURTS**

| Sl. No. | Name of the Court |
|---|---|
| 1 | JMFC – VII Court, Belagavi |
| 2 | JMFC – VIII Court, Belagavi |
| 3 | JMFC – VIII Court, Mangaluru |
| 4 | JMFC – IX Court, Mangaluru |
| 5 | JMFC –IV Court, Devanagere |

**ABSTRACT**

| Sl. No. | Name of the Cadre | No. of Courts |
|---|---|---|
| 1 | Addl. City Civil & Sessions Judges Courts, Bengaluru City (District Judge Cadre) (Established) | 21 |
| 2 | Addl. District & Sessions Courts (Established) | 27 |
| 3 | Addl. Chief Metropolitan Magistrate Courts, Bengaluru City (2 ACMM established) | 11 |
| 4 | Senior Civil Judge & JMFC Courts (2 Courts Established) | 24 |
| 5 | Addl. Senior Civil Judge & JMFC Courts (8 Courts Established) | 32 |
| 6 | Addl. Civil Judge & JMFC Courts | 85 |
| 7 | JMFC Courts | 5 |
| | **Total :** | **205** |

**S. UMESHA**
Under Secretary to Government (Admn.-I),
Law Department

**ANNEXURE – II**

**(Government Order No. LAW 137 LCE 2014, dated: 28.03.2016**

**No. of Posts Sanctioned to each Courts**

| Sl. No. | Posts | Sanctioned for each Court | Add. City Civil & Sessions Courts (Other than Dist. HQs.) | Addl. Civil & Sessions Courts (Dist. HQs.) | Addl. Senior Civil Judge & JMFC Courts | Addl. Civil Judge & JMFC Courts | Addl. Chief Metro-politan Magistrate Courts |
|---|---|---|---|---|---|---|---|
| **No. of Courts** | | | **21** | **16** | **32** | **85** | **11** |
| 1 | Judge | 1 | 21 | 16 | 32 | 85 | 11 |
| 2 | Judgement Writer-District Courts/ Stenographer-Senior Division Courts | 1 | 21 | 16 | 32 | 85 | 11 |
| 3 | FDA | 1 | 21 | 16 | 32 | 85 | 11 |
| 4 | Typist | 1 | 21 | 16 | 32 | 85 | 11 |
| 5 | Attender | 1 | 21 | 16 | 32 | 85 | 11 |
| 6 | Peon | 2 | 42 | 32 | 64 | 170 | 22 |
| | **Total** | **7** | **147** | **112** | **224** | **595** | **77** |

| Sl. No. | Posts | Sanctioned for each Court | Addl. District & Sessions Courts (Other than Dist. HQs.) | Senior Civil Judge & JMFC Courts |
|---|---|---|---|---|
| **No. of Courts** | | | **11** | **24** |
| 1 | Judge | 1 | 11 | 24 |
| 2 | Sheristedar | 1 | 11 | 24 |
| 3 | Judgement Writer-District Courts/Stenographer – Senior Division Courts | 1 | 11 | 24 |
| 4 | FDA | 1 | 11 | 24 |
| 5 | SDA | 2 | 22 | 48 |
| 6 | Typist | 1 | 11 | 24 |
| 7 | Bailiff | 2 | 22 | 48 |
| 8 | Process Server | 4 | 44 | 96 |
| 9 | Attender | 1 | 11 | 24 |
| 10 | Peon | 2 | 22 | 48 |
| | **Total** | **16** | **176** | **384** |

| Sl. No. | Posts | Sanctioned for each Court | JMFC Courts |
|---|---|---|---|
| **No. of Courts** | | | **5** |
| 1 | Judge | 1 | 5 |
| 2 | Sheristedar | 1 | 5 |
| 3 | Judgement Writer-District Courts/Stenographer – Senior Division Courts | 1 | 5 |
| 4 | FDA | 1 | 5 |

| Sl. No. | Posts | Sanctioned for each Court | JMFC Courts |
|---|---|---|---|
| 5 | SDA | 2 | 10 |
| 6 | Typist | 1 | 5 |
| 7 | Attender | 1 | 5 |
| 8 | Peon | 2 | 10 |
| | **Total** | **10** | **50** |

**PR. 326**
**SC. 125**

**S. UMESHA**
Under Secretary to Government (Admn.-1),
Law Department

## ಕಾನೂನು ಸಚಿವಾಲಯ

**ವಿಷಯ :** **ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ** ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಲಾ 81 ಕೆಎಲ್ಎಂ 2009, ದಿನಾಂಕ: 28–11–2012.
2. ಸರ್ಕಾರಿ ಆದೇಶ ಸಂಖ್ಯೆ: ಲಾ 40 ಕೆಎಲ್ಎಂ 2013, ದಿನಾಂಕ: 26–08–2015.
3. ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 40 ಕೆಎಲ್ಎಂ 2013, ದಿನಾಂಕ: 23–12–2015.
4. ಸರ್ಕಾರಿ ಸೇರ್ಪಡೆ ಆದೇಶ ಸಂಖ್ಯೆ: ಲಾ 40 ಕೆಎಲ್ಎಂ 2013, ದಿನಾಂಕ: 23–12–2015.
5. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ, ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/17/ಖಾಕಾಕಾ/2012–13/ನೇವಿ–2, ದಿನಾಂಕ: 21–01–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶ ದಿನಾಂಕ: 28–11–2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ ಕೋರ್ಸುಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (19)ರ ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26–08–2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (3)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26–08–2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿ ವೇತನಾನುದಾನಕ್ಕೆ ಒಳಪಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಶ್ರೀಮತಿ ಡಾ॥ ಸವಿತಾ ಎಲ್. ಪಾಟೀಲ್, ಶ್ರೀಮತಿ ಪದ್ಮ ಜಿ. ಧನವಾಡೆ, ಶ್ರೀ ಶಿವಕುಮಾರ್ ಗೌಡ ಎಸ್.ಎಸ್.ಬಿ. ಮಗದುಮ್ಮ ಮತ್ತು ಸಂಗಣ್ಣನವರ್ ಇವರುಗಳ ಬಗ್ಗೆ ಮಾಹಿತಿ ನೀಡಿರುತ್ತಾರೆ.

ಶ್ರೀಮತಿ ಪದ್ಮಾವತಿ, ಬಾಹುಬಲಿ, ಧನವಾಡೆ ಇವರು ದಿನಾಂಕ: 01–07–1999 ರಿಂದ 04–09–2010 ರವರೆಗೆ ಬೇರೆ ಬೇರೆ ಸಂಸ್ಥೆಗಳಲ್ಲಿ ಮತ್ತು ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಇಲ್ಲಿ ಸೇವೆ ಸಲ್ಲಿಸಿದ್ದು, ನಂತರ 01 ವರ್ಷ 05 ತಿಂಗಳು 10 ದಿನ ಎಲ್ಲಿಯೂ ಸೇವೆ ಸಲ್ಲಿಸಿರುವುದಿಲ್ಲ. ದಿನಾಂಕ: 14–02–2013 ರಿಂದ ಸದರಿ ಕಾಲೇಜಿನಲ್ಲಿ ಪುನಃ ಸೇವೆಗೆ ಸೇರಿರುತ್ತಾರೆ. ಇವರ ಜನ್ಮ ದಿನಾಂಕ: 08–04–1972 ಆಗಿರುತ್ತದೆ. ನೇಮಕಾತಿ ದಿನಾಂಕದಂದು ವಯೋಮಿತಿ ಮೀರಿರುತ್ತದೆ. ಸದರಿಯವರು NET/SLET/Ph.D ಪದವಿ ಹೊಂದಿಲ್ಲದೆ ಇರುವ ಕಾರಣ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿಲ್ಲ ಎಂದು ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು ತಿಳಿಸಿರುತ್ತಾರೆ.

ಶ್ರೀ ಶಿವಕುಮಾರ್‌ಗೌಡ ಎಸ್. ಪಾಟೀಲ್ ಇವರು ಕೂಡಾ 2009 ರ ನಂತರ ನೇಮಕಾತಿ ಹೊಂದಿರುವುದರಿಂದ ಇವರು NET/SLET/Ph.D ಪದವಿ ಹೊಂದಿಲ್ಲದೆ ಇರುವ ಕಾರಣ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿಲ್ಲ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (4)ರ ಸೇರ್ಪಡೆ ಆದೇಶದಲ್ಲಿ ಶ್ರೀಮತಿ ಎಸ್.ಬಿ. ಮುಗದಮ್ಮ, ಸಿಸಿಟಿ ಮತ್ತು ಶ್ರೀ ಸಂಗಣ್ಣವರ್, ಬೆರಳಚ್ಚುಗಾರರು ಇವರುಗಳಿಗೆ ಕ್ರಮವಾಗಿ ಕನ್ನಡ ಜ್ಯೂನಿಯರ್ ಮತ್ತು ಕನ್ನಡ ಮತ್ತು ಇಂಗ್ಲೀಷ್ ಸೀನಿಯರ್ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು 2 ವರ್ಷಗಳ ಕಾಲಾವಕಾಶ ನೀಡಲಾಗಿದೆ.

ಡಾ॥ ಸವಿತಾ ಎಲ್. ಪಾಟೀಲ್, ಸಹಾಯಕ ಪ್ರಾಧ್ಯಾಪಕರು ಇವರು ನೇಮಕಾತಿ ದಿನಾಂಕದಂದು 37 ವರ್ಷ ಹೊಂದಿದ್ದರಿಂದ ಇವರನ್ನು ದಿನಾಂಕ: 26–08–2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಆದರೆ ಇವರು 2007–08ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿ ಸ್ನಾತಕೋತ್ತರ ವಿಭಾಗದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದು, ಇವರು ನೇಮಕಾತಿ ಹೊಂದಿದ ಸಂದರ್ಭದಲ್ಲಿ ಇವರ ವಯಸ್ಸು 32 ವರ್ಷಗಳಾಗಿರುವುದರಿಂದ ಹಾಗೂ ಇವರು ಎಲ್.ಎಲ್.ಎಂ. (ಪ್ರಥಮ ದರ್ಜೆಯಲ್ಲಿ ಉತ್ತೀರ್ಣ) ಎಂ.ಫಿ.ಲ್. ಪಿ.ಹೆಚ್.ಡಿ. ಪದವಿ ಹಾಗೂ ಎನ್.ಇ.ಟಿ. ವಿದ್ಯಾರ್ಹತೆಯನ್ನು ಹೊಂದಿದ್ದು, ಇವರನ್ನು ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದೆಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಈ ಕಾಲೇಜು ಇಲ್ಲಿ ಲಭ್ಯವಿರುವ ಕಾರ್ಯಭಾರಕ್ಕನುಗುಣವಾಗಿ 08 ಬೋಧಕ ಸಿಬ್ಬಂದಿಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಲಾ 40 ಕೆಎಲ್‌ಎಂ 2013, ದಿನಾಂಕ: 26–08–2015ರಲ್ಲಿ 01–ಪ್ರಾಂಶುಪಾಲರು, 02–ಸಹಾಯಕ ಪ್ರಾಧ್ಯಾಪಕರು, 01–ಗ್ರಂಥಪಾಲಕರು ಹಾಗೂ 01–ದೈಹಿಕ ಶಿಕ್ಷಣ ಬೋಧಕರನ್ನು ಭರ್ತಿಮಾಡಲಾಗಿದೆ. 03–ಸಹಾಯಕ ಪ್ರಾಧ್ಯಾಪಕರು ಹುದ್ದೆಗಳು ಖಾಲಿ ಇದ್ದು, 01–ಎಸ್‌ಟಿ ಮತ್ತು 01–ಎಸ್‌ಸಿ ಹಾಗೂ 01–ಜಿಎಂ ಹುದ್ದೆಗಳಾಗಿವೆ.

ಡಾ॥ ಸವಿತಾ ಎಲ್. ಪಾಟೀಲ್, ಸಹಾಯಕ ಪ್ರಾಧ್ಯಾಪಕರು ಇವರು 3ಬಿ ವರ್ಗಕ್ಕೆ ಸೇರಿದ್ದು, ಹುರಕಡ್ಲಿ ಕಾನೂನು ಕಾಲೇಜಿನಲ್ಲಿ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕ–ಸಾಮಾನ್ಯ ಅಭ್ಯರ್ಥಿ ಹುದ್ದೆಗೆ ಎದುರಾಗಿ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಅದರಂತೆ ಈ ಅದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 40 ಕೆಎಲ್‌ಎಮ್ 2013, ಬೆಂಗಳೂರು, ದಿನಾಂಕ : 08–03–2016**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಈ ಸಂಸ್ಥೆಯ ಬೋಧಕ ಹುದ್ದೆಗಳಲ್ಲಿ ಸಾಮಾನ್ಯ ಅಭ್ಯರ್ಥಿ–01 ಖಾಲಿ ಇದ್ದು, ಡಾ॥ ಸವಿತಾ ಎಲ್. ಪಾಟೀಲ್, ಇವರನ್ನು ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲಾಗಿದೆ.

| ಕ್ರ. ಸಂ. | ಹೆಸರು | ಹುದ್ದೆ | ಮೀಸಲಾತಿ | ಸೇವೆವೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|
| 1 | ಡಾ॥ ಸವಿತಾ ಎಲ್. ಪಾಟೀಲ್ | ಸಹಾಯಕ ಪ್ರಾಧ್ಯಾಪಕರು | 3ಬಿ | 17–12–2012 | ಯುಜಿಸಿ ವೇತನ ಶ್ರೇಣಿ (M.Phil/Ph.D/NET ವಿದ್ಯಾರ್ಹತೆ ಹೊಂದಿರುತ್ತಾರೆ) |

**ಷರತ್ತುಗಳು:**

1. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಹುದ್ದೆಗಳನ್ನು ಈ ಆದೇಶದ ದಿನಾಂಕದಿಂದ 6 (ಆರು) ತಿಂಗಳೊಳಗಾಗಿ ಭರ್ತಿ ಮಾಡತಕ್ಕದ್ದು, ತಪ್ಪಿದಲ್ಲಿ ನೀಡಲಾಗಿರುವ ವೇತನಾನುದಾನವು ರದ್ದುಗೊಳ್ಳುತ್ತದೆ.
2. ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.
3. ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.
4. ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.
5. ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.
6. ಸಿಬ್ಬಂದಿಗಳ ವೇತನನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.
7. ದಿನಾಂಕ: 24–12–1998 ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.
8. ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
9. ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ₹.50/– ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.
10. ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.
11. ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

12. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

13. ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

14. ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ: 2014–00–105–0–15 Private Aided Law College-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 57 ವೆಚ್ಚ–10/2016, ದಿನಾಂಕ: 01–03–2016ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಸುಧಾಮಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಮಾನವ ಹಕ್ಕುಗಳು)

**PR. 327**

**SC. 100**

## ಆರ್ಥಿಕ ಸಚಿವಾಲಯ

**ವಿಷಯ :** 2015–16ನೇ ಸಾಲಿನ ಬೇಡಿಕೆ ಸಂಖ್ಯೆ–3, ಆಯವ್ಯಯ ಲೆಕ್ಕ ಶೀರ್ಷಿಕೆ 2040–00–101–0–10ರಲ್ಲಿ Waiver of Cane Purchase Tax and Road Cess-(Non-plan) ಅಡಿ **₹.** 764.18 ಲಕ್ಷಗಳನ್ನು ಸರ್ಕಾರಕ್ಕೆ ಅಧ್ಯರ್ಪಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ :** ಆಯುಕ್ತರ ಪತ್ರ ಸಂಖ್ಯೆ: KSA/CR/147/2013-14, dated: 31-03-2016.

**ಪ್ರಸ್ತಾವನೆ:**

2015–16ನೇ ಸಾಲಿನ ಬೇಡಿಕೆ ಸಂಖ್ಯೆ–3, ಆಯವ್ಯಯ ಲೆಕ್ಕ ಶೀರ್ಷಿಕೆ 2040–00–101–0–10 Waiver of Cane Purchase Tax and Road Cess-(Non-plan) ಅಡಿ ದಕ್ಷಿಣ ಕರ್ನಾಟಕದ 12 ಸಕ್ಕರೆ ಕಾರ್ಖಾನೆಗಳು ದಿನಾಂಕ:01.04.2013ರಿಂದ ದಿನಾಂಕ:21.11.2013ರವರೆಗೆ ಪಾವತಿಸಿದ ಕಬ್ಬು ಖರೀದಿ ತೆರಿಗೆ ಮತ್ತು ರಸ್ತೆ ಕರಕ್ಕೆ ಸಂಬಂಧಿಸಿದ ಒಟ್ಟು ಮೊತ್ತ ₹. 764.18 ಲಕ್ಷಗಳನ್ನು ಮರಳಿಸಲು ಪೂರಕ ಅಂದಾಜು–3 ಅಭಿಯಾಚನೆಯಡಿಯಲ್ಲಿ ಸೇರಿಸಲಾಗಿತ್ತು. ಆದರೆ, ಮೇಲೆ ಓದಲಾದ ಆಯುಕ್ತರು, ವಾಣಿಜ್ಯ ತೆರಿಗೆಗಳ ಇಲಾಖೆ, ಇವರ ಪತ್ರದಲ್ಲಿ ಸದರಿ ಮೊತ್ತವನ್ನು ಕಾರಣಾಂತರಗಳಿಂದ ಉಪಯೋಗಿಸಿಕೊಳ್ಳಲು ಸಾಧ್ಯವಾಗದ ಕಾರಣ, ಇದನ್ನು ಅಧ್ಯರ್ಪಿಸಿಕೊಳ್ಳಲು ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಆಇ 216 ಸಿಎಸ್ಎಲ್ 2013, ಬೆಂಗಳೂರು ದಿನಾಂಕ: 31.03.2016.**

2015–16ನೇ ಸಾಲಿನ ಬೇಡಿಕೆ ಸಂಖ್ಯೆ–3ರಲ್ಲಿ ಆಯವ್ಯಯ ಲೆಕ್ಕ ಶೀರ್ಷಿಕೆ 2040–00–101–0–10 Waiver of Cane Purchase Tax and Road Cess-(Non-plan) ಅಡಿ **₹. 764.18 ಲಕ್ಷಗಳನ್ನು (ಏಳು ನೂರು ಅರವತ್ನಾಲ್ಕು ಲಕ್ಷದ ಹದಿನೆಂಟು ಸಾವಿರ ರೂಪಾಯಿಗಳು ಮಾತ್ರ)** ಸರ್ಕಾರಕ್ಕೆ ಅಧ್ಯರ್ಪಿಸಿಕೊಳ್ಳಲು ಒಪ್ಪಲಾಗಿದೆ (ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ವಾಣಿಜ್ಯ ತೆರಿಗೆ–1)

**COMMERCIAL TAXES DEPARTMENT**

**ANNEXURE**

**STATEMENT OF SURRENDER OF GRANTS FOR THE YEAR 2015-16**

| Sl. No. | HEAD OF ACCOUNT | AMOUNT SURRENDERED (IN LAKHS) | REASONS FOR SAVINGS |
|---|---|---|---|
| **2040-00-101-0-10(Non-plan)** | | | |
| 1 | 2040-00-101-0-10/059-OTHER EXPENSES | 764.18 | Due to unavoidable circumstances |
| | **TOTAL** | **764.18** | |

**K.S. PADMAVATHI,**

Under Secretary to Government,

Finance Department. (CT-1)

**PR. 370**

## ಆರ್ಥಿಕ ಸಚಿವಾಲಯ

**ವಿಷಯ :** ಅರಣ್ಯ ಇಲಾಖೆಯ ವನ್ಯ ಜೀವಿ ವಿಭಾಗಗಳಲ್ಲಿ ಕರ್ತವ್ಯ ನಿರ್ವಹಿಸುವ ಸಿಬ್ಬಂದಿಗಳಿಗೆ ವಿಶೇಷ ಭತ್ಯೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012 (IX), ದಿನಾಂಕ: 14.06.2012.
2. ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012 (IX), ದಿನಾಂಕ: 24.04.2015.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯ ಜೀವಿ), ಕರ್ನಾಟಕ ಇವರ ದಿನಾಂಕ:31.10.2015ರ ಪತ್ರ ಸಂ:PCCF(WN)/EST/CR-05/2010-11.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಅರಣ್ಯ ಇಲಾಖೆಯ ವಿವಿಧ ಸಿಬ್ಬಂದಿಗಳಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸೇರ್ಪಡೆ ಆದೇಶದಲ್ಲಿ ಅರಣ್ಯ ಇಲಾಖೆಯ ವನ್ಯ ಜೀವಿ ವಿಭಾಗದ ಮುಂಚೂಣಿ ಸಿಬ್ಬಂದಿಗಳಿಗೆ ಪರಿಷ್ಕೃತ ದರಗಳಲ್ಲಿ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ದಿನಾಂಕ:11.09.2015ರಲ್ಲಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ 8ನೇ ರಾಜ್ಯ ವನ್ಯ ಜೀವಿ ಮಂಡಳಿ ಸಭೆಯಲ್ಲಿ ನಿರ್ಧರಿಸಿರುವಂತೆ ವನ್ಯ ಜೀವಿ ವಿಭಾಗದ ಸಿಬ್ಬಂದಿಗಳಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 20 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 04.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಸೇರ್ಪಡೆ ಆದೇಶ ಸಂ.ಆಇ 12 ಎಸ್‌ಆರ್‌ಪಿ 2012(IX), ದಿನಾಂಕ: 24.04.2015ನ್ನು ಮಾರ್ಪಡಿಸಿ ಅರಣ್ಯ ಇಲಾಖೆಯ ವನ್ಯ ಜೀವಿ ವಿಭಾಗದ ಅಧಿಕಾರಿ/ಸಿಬ್ಬಂದಿಗಳಿಗೆ ಕೆಳಕಂಡ ದರಗಳಲ್ಲಿ ವಿಶೇಷ ಭತ್ಯೆಯನ್ನು ನೀಡಲು ಆದೇಶಿಸಿದೆ.

| Category of Post | | Rate of Special Allowance (₹.per month) |
|---|---|---|
| **(b) Front line staff of the Wild Life Division** | | |
| i. | Range Forest Officer | 3500 |
| ii. | Deputy Range Forest Officer | 3500 |
| iii. | Forest Guard | 2700 |
| iv. | Group-D Employees | 2000 |

ಈ ಆದೇಶವು ತಕ್ಷಣದಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 371**
**SC. 50**

**ಕೆ.ಎಸ್. ರಾಜಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.(ಸೇವೆಗಳು–2)

## FOREST, ECOLOGY AND ENVIRONMENT SECRETARIAT

**Sub:** Diversion of 2.62 ha.of forest land in Shivapura Kaval Forest for the purpose of construction of Branch Canal of Halebeddu Madhihally Lift Scheme in Belur Taluk of Hassan District in favour of Executive Engineer, Yagachi Project Division, Belur, Hassan District.

**Read:**
1) Principal Chief Conservator of Forests (Head of Forest Force), Bengaluru, Letter No. A5(2):GFL.CR.44/2012-13, dt: 02-06-2014.
2) Government of Karnataka Letter No.FEE 67 FLL 2014, dt: 17-07-2014.
3) Government of India, M/o. Environment and Forests and Climate Change Letter No. 4-KRB 1021/2014/BAN/7427, dt: 31st August 2015.
4) Principal Chief Conservator of Forests (Head of Forest Force), Bengaluru Letter No. A5(2). GFL.CR.44/2012-13, dt: 05-02-2016.
5) Government of Karnataka Letter No. FEE 67 FLL 2014, dt: 19-03-2016.
6) Government of India, M/o. Environment and Forests and Climate Change Letter No. F.No.4-KRC 1047/2015/BAN/66, dt: 18-04-2016.

**Preamble:**

The Principal Chief Conservator of Forests (Head of Forest Force), Bengaluru vide letter under read at (1) had submitted a proposal for diversion of 2.62 ha. of forest land in Shivapura Kaval Forest for the purpose of construction of Branch Canal of Halebeedu-Madhihally Lift Scheme in Belur Taluk of Hassan District in favour of Executive Engineer, Yagachi Project Division, Belur, Hassan District.

After verification and examination, the proposal was recommended by Government of Karnataka and forwarded to Government of India to accord sanction u/s 2 of the Forest (Conservation) Act, 1980 vide letter under read at (2).

The Govt. of India, Ministry of Environment and Forests and Climate Change, Regional Office (Southern Zone), Bengaluru vide its letter under read at (3) have accorded its in-principle (Stage-1) approval for the proposal subject to fulfillment of certain conditions and the same was communicated to the Principal Chief Conservator of Forests (Head of Forest Force), Bengaluru with a direction to submit compliance report on fulfillment of conditions.

The Principal Chief Conservator of Forests (Head of Forest Force), Bengaluru vide letter under read at (4) had furnished the compliance report and the same was forwarded to Govt of India vide letter under read at (5) and requested to obtain final approval of Government of India u/s 2 of the Forest (Conservation) Act, 1980.

The Government of India, Ministry of Environment and Forests & Climate Change, Regional Office (Soutern Zone), Bengaluru vide letter under read at (6) have accorded and communicated its final approval (Stage-II) for the proposal u/s 2 of the Forest (Conservation) Act, 1980 subject to certain conditions.

The proposal has been examined in detail and hence the order.

**GOVERNMENT ORDER NO. FEE 67 FLL 2014, BENGALURU, DATED 10.05.2016.**

In the circumstances as explained in the preamble above, Government is pleased to accord approval u/s 2 of Forest (Conservation) Act, 1980 for diversion 2.62 ha. of forest land in Shivapura Kaval Forest for the purpose of construction of Branch Canal of Halebeedu-Madhihally Lift Scheme in Belur Taluk of Hassan District in favour of Executive Engineer, Yagachi Project Division, Belur, Hassan District, subject to following conditions.

1) The legal status of forest land shall remain unchanged and it will continue to be as forest land.
2) Demarcation of the proposed forest area shall be carried out by erecting 4 feet high cement concrete pillars duly numbered at an interval of 20 meters at the cost of user agency, before issue of Stage-II clearance.
3) Canal bank plantation shall be raised on both sides of the canal at the cost of User Agency as per the plan prepared by State Forest Department.
4) The total forest area utilized for the project shall not exceed 2.62 ha.
5) Any other condition that the Additional Principal Chief Conservator of Forests(Central),Regional Office, Bengaluru may impose from time to time for protection, improvement of flora and fauna in the forest area and public convenience shall also be applicable.
6) The Compensatory Afforestation (CA) shall be raised over 2.62 ha. of non forest land in Sy.No.17 of Kumarihally Village, Belur Taluk, Hassan District at the cost of user agency. Prior permission of Central Government shall be obtained for any change of Compensatory Afforestation site.
7) The Non- forest land for Compensatory Afforestation shall be notified by the State Government as RF/PF under Indian Forest Act, 1927 or the State Forest Act within a period of 6 months and Nodal Officer (FC) shall report the compliance within 6 months.
8) Handing and taking over of land and commencement of work in the land shall be done within a period of one years from the date of Stage-II approval. The forest land shall be used only for the purpose for which it is diverted.
9) The DGPS readings of the 2.62 ha. of non-forest land identified for Compensatory Afforestation as well as the forest land diverted shall be communicated to Govt. of India, Mlo Environment and Forests, Regional Office (Southern Zone), Kendriya Sadan, 4$^{th}$ Floor, E and F Wings 17$^{th}$ Main Road, 2nd Block, Koramangala, Bengaluru-560 034 within 30 days of transfer of the forest land.
10) Violation of any of the conditions shall invite penal action, as deemed fit by the Additional Principal Chief Conservator of Forests (Central), Regional Office, Bengaluru .
11) The lessee shall pay lease rent as fixed by the Government from time to time.
12) The lease tenure is for a period of 20 (twenty) years.
13) The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Dept.

14) In case any violation reported during the lease period, the lease shall be forfeited under section 82 of Karnataka Forest Act, 1963. The concerned Chief Conservator of Forests/Deputy Conservator of Forests is authorized to take necessary action in this regard.

15) No residential buildings shall be permitted in the proposed forest area.

16) The Karnataka Forest Act, 1963 and Rules, 1969 and other relevant Acts & Rules will be applicable for any violation.

17) Compensatory Afforestation shall be raised at the cost of user agency over equivalent non-forest area being proposed for diversion at the rate prevailing at the time of approval (at present it is ₹. 2,34,000/- per ha.).

18) The user agency has to pay the Net Present Value(NPV) of forest land diverted under this proposal as per Orders dated:28-3-2008 and 09-05- 2008 of the Hon' ble Supreme Court of India.

19) The user agency shall ensure that there should be no damage to the available fauna and other flora.

20) No crushing/breaking of stones shall be allowed inside forest area.

21) No labour camp shall be established on the forest land.

22) All waste/debris generated shall be scientifically disposed off outside the forest area under the directions/supervision of the Deputy Conservator of Forests, Hassan.

23) The user agency shall permit usage of water (flowing in the canal) at free of cost for development of nursery and allied forestry works nearby.

24) The user agency shall not sub-lease, mortgage or hypothecate the forest area.

25) The approval under the Forest (Conservation) Act, 1980 is subject to the clearance under the Environment (Protection) Act, 1986, if required.

26) The user agency shall abide by all the conditions imposed upon by the Government of India, the Government of Karnataka and the Principal Chief Conservator of Forests(Head of Forest Force).

By Order and in the name of the Governor of Karnataka,

**PR. 372**
**SC. 100**

**L. SHARADA,**
Under Secretary to Govt.,
Forest, Ecology and Environment Department.

## ಕೃಷಿ ಸಚಿವಾಲಯ

**ವಿಷಯ :** ಕೃಷಿ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದ 2015–16ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು 2016–17ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಉಲ್ಲೇಖ :**

1) ಸರ್ಕಾರದ ಆದೇಶ ಸಂಖ್ಯೆ: ಕೃಇ 38 ಕೃವಿವಿ 2015, ದಿನಾಂಕ 21–05–2015 ಮತ್ತು ಸಮ ಸಂಖ್ಯೆ ಆದೇಶದ ತಿದ್ದುಪಡಿ ದಿನಾಂಕ: 04–09–2015.
2) ಹಣಕಾಸು ನಿಯಂತ್ರಣಾಧಿಕಾರಿಗಳು,ಕೃವಿವಿ, ಬೆಂಗಳೂರು ಇವರ ಪತ್ರ ಸಂಖ್ಯೆ ಹನಿಅ/ವಿಭಾಗ 3/ಸಿ5–4/2016–17, ದಿನಾಂಕ: 23–04–2016.
3) ಹಣಕಾಸು ನಿಯಂತ್ರಣಾಧಿಕಾರಿಗಳು, ಕೃವಿವಿ, ಧಾರವಾಡ ಇವರ ಪತ್ರ ಸಂಖ್ಯೆ ಹನಿ/... /2016–17, ದಿನಾಂಕ: 28–04–2016.
4) ಕುಲಪತಿಗಳು, ಕೃವಿವಿ, ರಾಯಚೂರು ಇವರ ಪತ್ರ ಸಂಖ್ಯೆ: ಕುಪ/ಕೃವಿವಿರಾ/.../2016–17, ದಿನಾಂಕ:29–04–2016.
5) ಸಂಶೋಧನಾ ನಿರ್ದೇಶಕರು, ಕೃತೋವಿವಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ: UAHSS/Plan Programmes/ 2016-17, ದಿನಾಂಕ: 28–04–2016.
6) ದಿನಾಂಕ: 29–04–2016ರಂದು ಕಾರ್ಯದರ್ಶಿಗಳು, ಕೃಷಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ. (1)ರ ದಿನಾಂಕ: 21–05–2015 ಮತ್ತು ಸಮ ಸಂಖ್ಯೆಯ ತಿದ್ದುಪಡಿ ಆದೇಶದ ದಿನಾಂಕ: 04–09–2016ರಲ್ಲಿ 2015–16ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆಯಡಿ ನಿಗಧಿಪಡಿಸಲಾದ ಅನುದಾನವನ್ನು ಆಯಾ ಕೃಷಿ ವಿಶ್ವವಿದ್ಯಾಲಯಗಳಿಗೆ ಬಿಡುಗಡೆ ಮಾಡಲು ಮತ್ತು ಕೇಂದ್ರ ಅಥವಾ ರಾಜ್ಯ ಸರ್ಕಾರ ಸಂದರ್ಭಾನುಸಾರವಾಗಿ ಮಂಜೂರು ಮಾಡಬಹುದಾದ ಇತರೆ/ಹೆಚ್ಚುವರಿ ಅನುದಾನ ಸೇರಿದಂತೆ ಯೋಜನಾ ಕಾರ್ಯಕ್ರಮಗಳನ್ನು 2015–16ನೇ ಸಾಲಿನಲ್ಲಿ ಮುಂದುವರೆಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಿಂದ (5)ರಲ್ಲಿನ ಪತ್ರಗಳಲ್ಲಿ ಕೃಷಿ ವಿಶ್ವವಿದ್ಯಾಲಯಗಳು 2015–16ನೇ ಸಾಲಿನ ಚಾಲ್ತಿ ಯೋಜನೆಗಳನ್ನು 2016–17ನೇ ಸಾಲಿಗೆ ಮುಂದುವರೆಸುವಂತೆ ಕೋರಿರುತ್ತಾರೆ.

ದಿನಾಂಕ: 29–04–2016ರಂದು ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಾಲ್ಕು ಕೃಷಿ ವಿಶ್ವವಿದ್ಯಾಲಯಗಳು ಸಲ್ಲಿಸಿರುವ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸದರಿ ಕೃಷಿ ವಿಶ್ವವಿದ್ಯಾಲಯಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಒದಗಿಸಲಾಗುವ ಅನುದಾನಗಳನ್ನು ನಿಗಧಿಪಡಿಸಲಾದ ಯೋಜನೆ ಹಾಗೂ ಕಾರ್ಯಕ್ರಮಗಳಿಗೆ ಮುಂದುವರೆಸಬೇಕಾದ ಅವಶ್ಯಕತೆಗಳಿವೆ,

ಆದುದರಿಂದ ಸದರಿ ನಾಲ್ಕು ಕೃಷಿ ವಿಶ್ವವಿದ್ಯಾಲಯಗಳಿಗೆ ಯೋಜನೆ ಲೆಕ್ಕಶೀರ್ಷಿಕೆಗಳಡಿಯಲ್ಲಿ 2015-16ನೇ ಸಾಲಿನಲ್ಲಿ ಚಾಲ್ತಿಯಲ್ಲಿದ್ದ ಯೋಜನಾ ಕಾರ್ಯಕ್ರಮಗಳನ್ನು 2016-17ನೇ ಸಾಲಿಗೆ ಮುಂದುವರೆಸಲು ತೀರ್ಮಾನಿಸಲಾಯಿತು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ 10 ಕೃವಿವಿ 2016, ಬೆಂಗಳೂರು, ದಿನಾಂಕ: 05-05-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ರಾಜ್ಯದ 4 ಕೃಷಿ ವಿಶ್ವವಿದ್ಯಾಲಯಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದ, ವಿವಿಧ ರಾಜ್ಯ ವಲಯ ಯೋಜನೆಗಳನ್ನು ಚಾಲ್ತಿ ಯೋಜನೆಗಳೆಂದು ಪರಿಗಣಿಸಿ, ಅವುಗಳನ್ನು 2016-17ನೇ ಸಾಲಿನಲ್ಲಿ ಅಂದರೆ ದಿನಾಂಕ 01-04-2016ರಿಂದ 31-03-2017ರವರೆಗೆ ಈ ಕೆಳಕಂಡ ಯೋಜನೆಗಳನ್ನು ಮುಂದುವರೆಸಲು ಕೆಲವು ಷರತ್ತುಗಳೊಂದಿಗೆ ಸರ್ಕಾರವು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

| ಕ್ರ.ಸಂ. | ಕೃಷಿ ವಿಶ್ವವಿದ್ಯಾಲಯ | ವಿವರ | ಲೆಕ್ಕ ಶೀರ್ಷಿಕೆ | 2016-17ನೇ ಸಾಲಿನ ಆಯವ್ಯಯ (₹. ಲಕ್ಷಗಳಲ್ಲಿ) |
|---|---|---|---|---|
| 1. | ಬೆಂಗಳೂರು | ಕೃಷಿ ಸಂಶೋಧನೆ | 2415-80-004-1-01 | 2600.00 |
| | | ಶಿಕ್ಷಣ | 2415-80-277-1-01 | 2110.00 |
| | | ನಬಾರ್ಡ್ ಕಾಮಗಾರಿಗಳು | 4401-00-800-1-05 | 318.00 |
| 2. | ಧಾರವಾಡ | ಕೃಷಿ ಸಂಶೋಧನೆ | 2415-80-004-2-01 | 2100.00 |
| | | ಶಿಕ್ಷಣ | 2415-80-277-2-01 | 2241.00 |
| | | ನಬಾರ್ಡ್ ಕಾಮಗಾರಿಗಳು | 4401-00-800-1-06 | 318.00 |
| 3. | ರಾಯಚೂರು | ಕೃಷಿ ಸಂಶೋಧನೆ | 2415-80-004-3-00 | 1120.00 |
| | | ಶಿಕ್ಷಣ | 2415-80-277-3-01 | 2516.00 |
| | | ನಬಾರ್ಡ್ ಕಾಮಗಾರಿಗಳು | 4401-00-800-1-03 | 318.00 |
| 4. | ಶಿವಮೊಗ್ಗ | ಶಿಕ್ಷಣ (ವೇತನಗಳು, ಆಸ್ತಿಗಳ ಸೃಜನೆ, ಸಾಮಾನ್ಯ) | 2415-80-277-5-01 | 5574.00 |
| | | ನಬಾರ್ಡ್ ಕಾಮಗಾರಿಗಳು | 4401-00-800-1-02 | 318.00 |

**ಷರತ್ತುಗಳು:**

1) 2015-16ನೇ ಸಾಲಿನಲ್ಲಿನ ಚಾಲ್ತಿ ಯೋಜನೆ ರೂಪದಲ್ಲಿ ಮುಂದುವರೆಸಲಾಗಿರುವ ಎಲ್ಲಾ ಯೋಜನಾ ಕಾರ್ಯಕ್ರಮಗಳನ್ನು 2016-17ನೇ ಸಾಲಿನ ಆಯವ್ಯಯದಲ್ಲಿ ಅವುಗಳಿಗೆ ಮೀಸಲಿಟ್ಟ ಅನುದಾನಕ್ಕೆ ಮೀರದಂತೆ ಅನುಷ್ಠಾನಗೊಳಿಸತಕ್ಕದ್ದು.

2) 2016-17ನೇ ಸಾಲಿನಲ್ಲಿ ಮುಂದುವರೆಸಲಾಗುವ ವಿವಿಧ ಕೇಂದ್ರ ಪುರಸ್ಕೃತ ಹಾಗೂ ಕೇಂದ್ರ ವಲಯದ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಮಾರ್ಗಸೂಚಿ ಹಾಗೂ ಅನುದಾನ ಬಿಡುಗಡೆಗೆ ಅನುಗುಣವಾಗಿ ಮಾತ್ರ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸತಕ್ಕದ್ದು ಮತ್ತು ಕಾರ್ಯಕ್ರಮ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರವು ಆಗಿಂದಾಗ್ಗೆ ನೀಡುವ ಮಾರ್ಗಸೂಚಿ ಪ್ರಕಾರವೇ ಯೋಜನೆಗಳನ್ನು ಅನುಷ್ಠಾನಗೊಳಿಸತಕ್ಕದ್ದು.

3) 2015-16ನೇ ಸಾಲಿನಲ್ಲಿದ್ದ ಯೋಜನಾ ಕಾರ್ಯಕ್ರಮಗಳ ಘಟಕಗಳಿಗೆ ಮಾತ್ರ 2016-17ನೇ ಸಾಲಿನಲ್ಲಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ. ಆದರೆ, ಕೃಷಿ ವಿಶ್ವವಿದ್ಯಾಲಯಗಳು ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಾಗ ಯಾವುದೇ ಹೊಸ ಘಟಕ ಸೇರ್ಪಡೆ/ಘಟಕ ಪರಿವರ್ತನೆ/ಘಟಕ ಮಾರ್ಪಾಡುಗಳು ಮಾಡಬೇಕಾದಲ್ಲಿ ಸರ್ಕಾರದ ಪೂರ್ವಾನುಮೋದನೆ/ ಮಂಜೂರಾತಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

4) ಅಂತಹ ಪ್ರಸ್ತಾವನೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಪಿಡಿ 5 ಐಎಂಎಂ 2010, ದಿನಾಂಕ: 03-04-2010 ರನ್ವಯ ಸಿದ್ದಪಡಿಸಿ, ಸರ್ಕಾರದ ಮಂಜೂರಾತಿಗಾಗಿ ಕೂಡಲೇ ತಪ್ಪದೆ ಸಲ್ಲಿಸತಕ್ಕದ್ದು.

5) ವಿಶ್ವವಿದ್ಯಾಲಯಗಳು 2016-17ನೇ ಸಾಲಿನಲ್ಲಿ ಚಾಲ್ತಿಯ ರೂಪದಲ್ಲಿ ಮುಂದುವರೆಸಲಾದ ಯೋಜನಾ ಕಾರ್ಯಕ್ರಮಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಸರ್ಕಾರ ಹೊರಡಿಸಿದ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2016ರ ದಿನಾಂಕ: 02-04-2016ರನ್ವಯ ಅನುದಾನ ಬಿಡುಗಡೆ ಕೋರಿ ಸೂಕ್ತ ಪ್ರಸ್ತಾವನೆಗಳನ್ನು ಸಿದ್ದಪಡಿಸಿ ಸರ್ಕಾರಕ್ಕೆ ಕಳುಹಿಸತಕ್ಕದ್ದು.

6) ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳು ಶಿಕ್ಷಣ ಮತ್ತು ಸಂಶೋಧನೆಗೆ ಸಂಬಂಧಿಸಿದಂತೆ ಅನುದಾನ ಹಂಚುವಾಗ ಈಗಾಗಲೇ ಮುಂದುವರೆಯುತ್ತಿರುವ ಕಾರ್ಯಕ್ರಮಗಳು, ಸಚಿವ ಸಂಪುಟದಲ್ಲಿ ಅನುಮೋದನೆಯಾದ ಕಾರ್ಯಗಳು (ಮೂಲಭೂತ ಸೌಕರ್ಯಗಳು ಸೇರಿದಂತೆ), ಸರ್ಕಾರ ಆಧ್ಯತೆ ಮೇರೆಗೆ ಅನುಮೋದಿಸಿರುವ ಕಾರ್ಯಗಳು ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳಿಗೆ ಅವಶ್ಯವಾದ ಹಣವನ್ನು ಗುರುತಿಸಿ, ನಂತರ ಹೊಸ ಕಾರ್ಯಕ್ರಮಗಳಿದ್ದಲ್ಲಿ ಪರಿಶೀಲಿಸತಕ್ಕದ್ದು.

7) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ, 1999ರಲ್ಲಿ ಹಾಗೂ ಅದರಡಿಯ ನಿಯಮಾವಳಿಯಲ್ಲಿ ಸೂಚಿಸಿರುವಂತೆ ಪರಿಶೀಲಿಸಿ ಕ್ರಮ ಜರುಗಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 29–04–2016ರಂದು ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಯನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಮೇಶ್,**

ಸರ್ಕಾರ ಅಧೀನ ಕಾರ್ಯದರ್ಶಿ,

(ಸೇವೆಗಳು ಮತ್ತು ಸಮನ್ವಯ) ಕೃಷಿ ಇಲಾಖೆ.

**PR. 373**
**SC. 25**

## INFRASTRUCTURE DEVELOPMENT SECRETARIAT

### CORRIGENDUM

**No. : IDD 140 DIA 2015, Bengaluru, Dated: 17-05-2016.**

In the G.O No IDD 140 DIA 2015, dated 26.04.2016 the words appearing at SI No.1 in the Order portion shall be substituted with and read as:

1) A Committee constituting of Managing Director, Karnataka State Industrial Infrastructure Development Corporation and Director (PPP), Infrasturcture Development Department, shall be the Tender Inviting Authority in terms of the provisions made under the KTPP Act, 1999 and Rules, 2000.

By Order in the name of the Governor of Karnataka,

**ROBIN VANARAJ. J,**

Under secretary to Government,

Infrastrurcture Development Department.

**PR-374**
**SC-100**

## ಸಹಕಾರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸಿಒ 138 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 07–05–2016.**

ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ:ಸಿಒ 212 ಸಿಎಲ್‌ಎಸ್ 2013, ದಿನಾಂಕ: 18.08.2015 ರಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಿಒ 212 ಸಿಎಲ್‌ಎಸ್ 2013, ದಿನಾಂಕ: 09.03.2015 ರ ಆದೇಶದ ಅನುಬಂಧ ಕ್ರಮ ಸಂಖ್ಯೆ:52 ರಲ್ಲಿ **"**ಜೈ ಹನುಮಾನ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ಹಣಬರವಾಡಿ, ತಾ:ಚಿಕ್ಕೋಡಿ,ಜಿ:ಬೆಳಗಾವಿ**"** ಎಂದು ತಿದ್ದುಪಡಿ ಆದೇಶ ಮಾಡಲಾಗಿರುತ್ತದೆ.

ಪ್ರಸ್ತುತ ಈ ಸಂಘವನ್ನು ಬದಲಿಸಿ **"**ಹುಲಕುಂದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹುಲಕುಂದ ತಾ॥, ರಾಮದುರ್ಗ, ಬೆಳಗಾವಿ ಜಿಲ್ಲೆ**"** ಈ ಸಂಘದ ಹೊಸ **"**ಕಟ್ಟಡ ನಿರ್ಮಾಣ**"** ಎಂದು ತಿದ್ದುಪಡಿ ಮಾಡಲಾಗಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಉಳಿದಂತೆ ಆದೇಶದಲ್ಲಿ ಯಾವುದೇ ಮಾರ್ಪಾಡು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

**PR-375**
**SC-50**

## ಆರ್ಥಿಕ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಆಇ 7 ಮುಭನಿ 2016, ಬೆಂಗಳೂರು, ದಿನಾಂಕ: 12.04.2016.**

**ವಿಷಯ:** ಸೇವೆಯಿಂದ ನಿವೃತ್ತಿ ಹೊಂದಲಿರುವ ಚಂದಾದಾರರ ಸಾಮಾನ್ಯ ಭವಿಷ್ಯ ನಿಧಿಯಲ್ಲಿ ಸಂಚಿತವಾದ ಮೊತ್ತವನ್ನು ಅಂತಿಮವಾಗಿ ಹಿಂತೆಗೆದುಕೊಳ್ಳುವ ಬಗ್ಗೆ ವಿಳಂಬವಿಲ್ಲದೇ ಕ್ರಮ ವಹಿಸುವ ಕುರಿತು.

1. ಸಾಮಾನ್ಯ ಭವಿಷ್ಯ ನಿಧಿಯಿಂದ ಅಂತಿಮವಾಗಿ ಹಣ ಹಿಂತೆಗೆಯಲು ಮಂಜೂರು ಮಾಡುವ ಸಕ್ಷಮ ಪ್ರಾಧಿಕಾರಿಯು ಚಂದಾದಾರರು ನಿವೃತ್ತಿ ಹೊಂದುವ ದಿನಾಂಕಕ್ಕೆ 6 ತಿಂಗಳ ಪೂರ್ವದಲ್ಲೇ ಅಂತಿಮವಾಗಿ ಹಣ ಹಿಂತೆಗೆಯುವ ಅರ್ಜಿಯನ್ನು ನಿವೃತ್ತರಾಗುತ್ತಿರುವ ಚಂದಾದಾರರಿಂದ ಪಡೆದು ಹಾಗೂ ಅವನ್ನು ಎಲ್ಲಾ ರೀತಿಯಿಂದಲೂ ಪೂರ್ಣಗೊಳಿಸಿ ಮಹಾಲೇಖಪಾಲರ ಕಛೇರಿಗೆ ನಿವೃತ್ತಿಗೆ 2 ತಿಂಗಳು ಮುನ್ನ ಅಗತ್ಯವಿರುವ ಪ್ರಮಾಣಪತ್ರಗಳೊಂದಿಗೆ ಅಂದರೆ, ಕಳೆದ 12 ತಿಂಗಳಲ್ಲಿನ ಅವಧಿಗೆ ಸಂಬಂಧಿಸಿದಂತೆ, ಅಂತಿಮವಾಗಿ ಹಿಡಿಯಲ್ಪಟ್ಟ ವಂತಿಗೆ, ತಾತ್ಕಾಲಿಕ ಮುಂಗಡ/ಅಂಶಿಕ ಅಂತಿಮ ಹಣ ಮಂಜೂರಾಗಿರುವ ವಿವರಗಳೊಂದಿಗೆ ಕಳುಹಿಸಬೇಕಾಗಿರುತ್ತದೆ.

2. ಆದರೆ, ಈ ಸೂಚನೆಗಳನ್ನು ಹಲವಾರು ಸಕ್ಷಮ ಪ್ರಾಧಿಕಾರಿಗಳು/ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ನಿಗಧಿತ ಕಾಲಮಿತಿಯಲ್ಲಿ ಪಾಲನೆ ಮಾಡುತ್ತಿಲ್ಲವೆಂದು ಮಹಾಲೇಖಪಾಲರು ಸರ್ಕಾರದ ಗಮನಕ್ಕೆ ತಂದಿರುತ್ತಾರೆ. ಮಹಾಲೇಖಪಾಲರು ನೀಡಿರುವ ಮಾಹಿತಿಯನುಸಾರ 2014–15ನೇ ಸಾಲಿನಲ್ಲಿನ ಇಂತಹ ಅಂತಿಮ ಹಣ ಹಿಂಪಡೆಯುವಿಕೆ ಪ್ರಕರಣಗಳ ಪರಿಶೀಲನೆಯಲ್ಲಿ ಕೇವಲ ಶೇ.39 ರಷ್ಟು ಪ್ರಕರಣಗಳು ಮಾತ್ರ ಚಂದಾದಾರರು ನಿವೃತ್ತರಾಗುವ ದಿನಾಂಕಕ್ಕೆ ಮುನ್ನ ಸ್ವೀಕೃತವಾಗಿರುತ್ತದೆ ಹಾಗೂ 1 ವರ್ಷಕ್ಕಿಂತಲೂ ಅಧಿಕವಾಗಿ ಶೇ.5ರಷ್ಟು ಪ್ರಕರಣಗಳಲ್ಲಿ ಗುರುತಿಸಲ್ಪಟ್ಟಿರುತ್ತದೆ. ಮುಂದುವರೆದು, ವ್ಯಾಜ್ಯವಿರುವ ಪ್ರಕರಣಗಳನ್ನು ಹೊರತುಪಡಿಸಿ ಕೆಲವು ಮರಣ ಪ್ರಕರಣಗಳಲ್ಲಿಯೂ ಸಹ ಬಹಳ ವಿಳಂಬವಾಗಿರುವುದು ಕಂಡುಬಂದಿರುತ್ತದೆ.

3. ಸಾಮಾನ್ಯ ಭವಿಷ್ಯ ನಿಧಿ ನಿಯಮ 18 ರನ್ವಯ, ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾಗಿರುವ ಎಲ್ಲಾ ದೃಢೀಕರಣಗಳನ್ನು ಹೊಂದಿರುವ ಅರ್ಜಿಗಳನ್ನು ನಿವೃತ್ತಿ ದಿನಾಂಕದವರೆಗೂ ಬಡ್ಡಿ ಲೆಕ್ಕಚಾರ ಹಾಕಿ ಪಾವತಿಗೆ ವ್ಯವಸ್ಥೆಗೊಳಿಸಲಾಗಿರುತ್ತದೆ. ಇದರಿಂದಾಗಿ ಚಂದಾದಾರರು ನಿವೃತ್ತಿಯಾಗುವ 15 ದಿನಗಳಿಗೆ ಮುನ್ನ ಸದರಿ ಮೊತ್ತವನ್ನು ಚಂದಾದಾರರು ಪಡೆಯಲು ಅನುವಾಗುತ್ತದೆ. ಆದರೆ, ಸಂಬಂಧಪಟ್ಟ ಇಲಾಖೆಗಳು ವಿಳಂಬವಾಗಿ ಅರ್ಜಿಗಳನ್ನು ಮಹಾಲೇಖಪಾಲರಿಗೆ ಕಳುಹಿಸುತ್ತಿರುವುದರಿಂದ, ಸದರಿ ನಿಯಮ 18ನ್ನು ಪರಿಣಾಮಕಾರಿಯಾಗಿ ಪಾಲಿಸಲು ತೊಂದರೆಯಾಗುತ್ತಿದೆ.

4. ಮುಂದುವರೆದು, ಸಾಮಾನ್ಯ ಭವಿಷ್ಯ ನಿಧಿ ನಿಯಮ 18ರನ್ವಯ ಸಕ್ಷಮ ಪ್ರಾಧಿಕಾರಿಗಳು/ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಕಾಲಮಿತಿಯಲ್ಲಿ ಕ್ರಮ ವಹಿಸದಿದ್ದಲ್ಲಿ ಈ ಕೆಳಕಂಡಂತೆ ಸರ್ಕಾರದ ಬೊಕ್ಕಸಕ್ಕೆ ಅನಗತ್ಯವಾಗಿ ಹೊರೆಬೀಳುತ್ತದೆ.

1. ಸಾಮಾನ್ಯ ಭವಿಷ್ಯ ನಿಧಿ ನಿಯಮ 14(4)ರನ್ವಯ ಅಂತಿಮ ಹಿಂಪಡೆಯುವಿಕೆ ಮೊತ್ತವನ್ನು ಪಾವತಿ ಮಾಡುವ ದಿನಾಂಕಕ್ಕೆ ಹಿಂದಿನ ಒಂದು ತಿಂಗಳವರೆಗೆ ಬಡ್ಡಿಯನ್ನು ನೀಡಬೇಕಾಗಿರುತ್ತದೆ. ಹೀಗಾಗಿ ವಿಳಂಬಿತ ಪ್ರಕರಣಗಳಲ್ಲಿ ಬಡ್ಡಿಯ ಮೊತ್ತವು ಹೆಚ್ಚಾಗಿ ಸರ್ಕಾರದ ಬೊಕ್ಕಸಕ್ಕೆ ಅನಗತ್ಯ ಹೊರೆ ಉಂಟಾಗುತ್ತದೆ.
2. ಜೊತೆಗೆ ಈ ರೀತಿ ವಿಳಂಬಿತ ಪಾವತಿ ಪ್ರಕರಣದಲ್ಲಿ ನಿವೃತ್ತ ಚಂದಾದಾರರು ಆದಾಯ ತೆರಿಗೆಯ ವಿನಾಯಿತಿ ಪಡೆಯುವ ಸಲುವಾಗಿ ಸಾಮಾನ್ಯ ಭವಿಷ್ಯ ನಿಧಿಯಲ್ಲಿಯೇ ಹಣ ಉಳಿಸಿಕೊಳ್ಳಲು ಉತ್ತೇಜಿಸಿದಂತಾಗುತ್ತದೆ. ಇದಕ್ಕೆ ಅವಕಾಶ ಕಲ್ಪಿಸಬಾರದಾಗಿರುತ್ತದೆ.

5. ಚಂದಾದಾರರ ಹುಟ್ಟಿದ ದಿನಾಂಕ ಮತ್ತಿತ್ತರ ವಿವರಗಳು ಹೆಚ್.ಆರ್.ಎಂ.ಎಸ್. ವೆಬ್‌ಸೈಟ್‌ನಲ್ಲಿ ಲಭ್ಯವಿರುವುದರಿಂದ, ಈ ಮೂಲಕ ಎಲ್ಲಾ ಇಲಾಖಾ ಮುಖ್ಯಸ್ಥರಿಗೂ ಹಾಗೂ ಅವರ ನಿಯಂತ್ರಣದಲ್ಲಿರುವ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಮೇಲ್ಕಂಡ ನಿಯಮದಡಿ ಸಾಮಾನ್ಯ ಭವಿಷ್ಯ ನಿಧಿ ಅಂತಿಮ ಹಿಂಪಡೆಯುವಿಕೆ ಪ್ರಕರಣಗಳಲ್ಲಿ ಚಾಚೂ ತಪ್ಪದೆ ಕ್ರಮ ವಹಿಸಿ ಅರ್ಜಿಗಳನ್ನು ಪೂರ್ಣಗೊಳಿಸಿ ಮಹಾಲೇಖಪಾಲರಿಗೆ ಕಳುಹಿಸಲು ಸೂಚಿಸಲಾಗಿದೆ.

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.(ಆಡಳಿತ ಮತ್ತು ಮುಂಗಡಗಳು)

**PR-376**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಕೆ.ಮಂಜಾನಾಯ್ಕ, ಕ್ಷೇತ್ರ ಸಮನ್ವಯಾಧಿಕಾರಿ, ಸರ್ವ ಶಿಕ್ಷಣ ಅಭಿಯಾನ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು ಗ್ರೇಡ್–2 ಹುದ್ದೆಗೆ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**

1) ಶ್ರೀ ಕೆ.ಮಂಜಾನಾಯ್ಕ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಮನವಿ ಪತ್ರ ದಿನಾಂಕ: 23–08–2015 ಮತ್ತು 09–11–2015.
2) ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಪ್ರೌಢ ಶಿಕ್ಷಣ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 66 ಎಸ್‌ಇಎಸ್ 2015, ದಿನಾಂಕ: 24–03–2015 ಮತ್ತು 18–08–2015.
3) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಸಕನಿ/ಸಿಬ್ಬಂದಿ–1/ಸಿಆರ್–20/2015–16, ದಿನಾಂಕ: 30–07–2015.
4) ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಇಲಾಖಾ ಪತ್ರಾಂಕಿತ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರ ಮನವಿ ದಿನಾಂಕ: 22–12–2012.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 23–08–2015 ಮತ್ತು 09–11–2015ರ ಮನವಿಗಳಲ್ಲಿ ಶ್ರೀ ಕೆ.ಮಂಜಾನಾಯ್ಕ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ–16(ಎ)(ii)ರನ್ವಯ ಶಿಕ್ಷಣ ಇಲಾಖೆಯಿಂದ ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಹುದ್ದೆಗೆ ವಿಲೀನಗೊಳಿಸುವಂತೆ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 24–03–2015, 18–08–2015 ಮತ್ತು 19–11–2015 ರ ಅನಧಿಕೃತ ಟಿಪ್ಪಣಿಗಳಲ್ಲಿ ಶಿಕ್ಷಣ ಇಲಾಖೆಯು ಶ್ರೀ ಕೆ.ಮಂಜಾನಾಯ್ಕ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಇವರ ಸೇವೆಯನ್ನು ಕರ್ನಾಟಕ

ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(ಎ)(ii) ರಡಿ ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ವೃಂದದ ಹುದ್ದೆಯಲ್ಲಿ ಖಾಯಂ ವಿಲೀನಗೊಳಿಸುವ ಕುರಿತು ತನ್ನ ಅಭಿಪ್ರಾಯದೊಂದಿಗೆ ಸದರಿಯವರ ಸೇವಾ ವಿವರಗಳನ್ನು ನೀಡಿರುತ್ತದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 30–07–2015 ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಹುದ್ದೆಯ ನೇರ ನೇಮಕಾತಿ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದಿಂದ ಗೆಜೆಟೆಡ್ ಪ್ರೋಬೇಷನರ್ಸ್ ಪರೀಕ್ಷೆಯ ಮೂಲಕ ಭರ್ತಿ ಮಾಡಲು ಅವಕಾಶ ಕಲ್ಪಿಸಲಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಈಗಾಗಲೇ ಆಯೋಗಕ್ಕೆ ಮಾಹಿತಿಯನ್ನು ಸಲ್ಲಿಸಲಾಗಿರುವುದರಿಂದ ಯಾವುದೇ ನೇರ ನೇಮಕಾತಿ ಹುದ್ದೆಯು ಖಾಲಿ ಇರುವುದಿಲ್ಲ, ನೇರ ನೇಮಕಾತಿ ಹುದ್ದೆಯ ಎದುರಾಗಿ ಮಾಡಲಾಗುವ ವಿಲೀನ ಪ್ರಕ್ರಿಯೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯುವುದು ಅವಶ್ಯಕವಾಗಿರುತ್ತದೆ. ಅಲ್ಲದೇ, ಶ್ರೀ ಕೆ.ಮಂಜಾನಾಯ್ಕ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ ರವರ ಸೇವೆಯು ಇಲಾಖೆಗೆ ಅವಶ್ಯಕತೆ ಇರುವುದಿಲ್ಲವಾದ್ದರಿಂದ ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಗೆ ವಿಲೀನಗೊಳಿಸಬಾರದೆಂಬ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (5) ರಲ್ಲಿ ಓದಲಾದ ದಿನಾಂಕ: 22–12–2012 ರ ಮನವಿಯನ್ನು ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಇಲಾಖಾ ಪತ್ರಾಂಕಿತ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರು ಆಯುಕ್ತರಿಗೆ ಸಲ್ಲಿಸಿ, ಬೇರೆ ಇಲಾಖೆಗಳ ಉಪನ್ಯಾಸಕರು ಹಾಗೂ ಇತರೆ ಸಿಬ್ಬಂದಿಗಳನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನ ಮಾಡುವುದರಿಂದ, ತಮ್ಮ ಪದೋನ್ನತಿಗೆ ಧಕ್ಕೆ ಉಂಟಾಗುವುದೆಂದು ಪ್ರತಿಪಾದಿಸಿದ್ದಾರೆ.

ಸಮಾಜ ಕಲ್ಯಾಣ ಇಲಾಖೆಯಲ್ಲಿ ಹಲವಾರು ಹೊಸ ಯೋಜನೆಗಳು ರೂಪಿತವಾಗಿದ್ದು, ಹಲವಾರು ಹುದ್ದೆಗಳು ಸಕ್ರಮವಾಗಿ ಭರ್ತಿಯಾಗದೆ ಖಾಲಿ ಇರುವುದರಿಂದ, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಅವಶ್ಯಕತೆ ಹೆಚ್ಚಾಗಿದ್ದು, ಇಲಾಖೆಯ ಯೋಜನೆ ಅನುಷ್ಠಾನಕ್ಕೆ ತೊಂದರೆಯಾಗಿರುವುದರಿಂದ, ಖಾಯಂ ಅಧಿಕಾರಿಗಳ ಅವಶ್ಯಕತೆ ಇರುವುದನ್ನು ಮನಗಂಡು ಶ್ರೀ ಕೆ.ಮಂಜಾನಾಯ್ಕ, ಕ್ಷೇತ್ರ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರನ್ನು ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 238 ಪಕಸೇ 2015, ಬೆಂಗಳೂರು, ದಿನಾಂಕ: 28–04–2016..**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಕೆ.ಮಂಜಾನಾಯ್ಕ ಕ್ಷೇತ್ರ ಸಮನ್ವಯಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಹುದ್ದೆಗೆ ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977 ನಿಯಮ 16(ಎ)(ii) ಮೇರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಆದೇಶಿಸಿದೆ.

ಮುಂದುವರೆದು ಸದರಿ ಅಧಿಕಾರಿಗಳನ್ನು ಸಹಾಯಕ ನಿರ್ದೇಶಕ ಗ್ರೇಡ್–2, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಮೈಸೂರು ತಾಲ್ಲೂಕು ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

**ಈ ಸಂಬಂಧದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಈ ಕೆಳಗೆ, ವಿಧಿಸಿರುವ ಷರತ್ತುಗಳನ್ನು ಸದರಿ ಅಧಿಕಾರಿಯಿಂದ ಖಾತ್ರಿ ಪಡಿಸಿಕೊಳ್ಳತಕ್ಕದ್ದು:**

1) ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕ ಮಾಡಿಕೊಂಡಿರಬೇಕು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು.

2) ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗದಿಪಡಿಸಿರಬಹುದಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು ಒಂದು ವೇಳೆ ನಿರ್ದಿಷ್ಟಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದಿದ್ದಲ್ಲಿ ಮುಂದಿನ 2 ವರ್ಷಗಳ ಒಳಗೆ ಉತ್ತೀರ್ಣರಾಗತಕ್ಕದ್ದು.

3) ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿರುವುದರಿಂದ ವರ್ಗಾವಣೆ ಮೂಲಕ ನೇಮಿಸಲಾಗುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು.

4) ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆಯ ಮೂಲಕ ಪಡೆಯಬೇಕು.

5) ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಿರಬೇಕು.

6) ನೌಕರರು ವರ್ಗಾವಣೆ ಭತ್ಯ ಪಡೆಯಲು ಅರ್ಹರಿರುವುದಿಲ್ಲ.

ಮೇಲ್ಕಂಡ ಎಲ್ಲಾ ಷರತ್ತುಗಳನ್ನು ಪೂರೈಸುವ ಮುಚ್ಚಳಿಕೆಯ ಪ್ರಮಾಣ ಪತ್ರವನ್ನು ಬಾಂಡ್ ಪೇಪರ್ ಮೂಲಕ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಿರಿಜಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಮಾಜ ಕಲ್ಯಾಣ ಇಲಾಖೆ.

PR-377

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯಲ್ಲಿನ ರೇಷ್ಮೆ ಉಪ ನಿರ್ದೇಶಕರ ಹುದ್ದೆಯನ್ನು ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸುವ ಕುರಿತು.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ–1(2):ರೇಉನಿ: ಉನ್ನತೀಕರಣ: 89:2015–16, ದಿನಾಂಕ 07/28–12–2015 ಮತ್ತು 17–03–2016.

**ಪ್ರಸ್ತಾವನೆ:–**

ಮೇಲೆ ಓದಲಾದ ದಿನಾಂಕ 07/28–12–2015 ಮತ್ತು 17–03–2016ರ ಪತ್ರಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 19–10–2015ರಂದು ನಡೆದ ಸಭೆಯ ತೀರ್ಮಾನವನ್ನು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಈ ಕೆಳಕಂಡಂತೆ ವಿವರಿಸಿರುತ್ತಾರೆ.

> ಹಾಲಿ ಇರುವ 62 ರೇಷ್ಮೆ ಉಪ ನಿರ್ದೇಶಕರುಗಳ ಪೈಕಿ ಬೆಂಗಳೂರು (ನಗರ), ಧಾರವಾಡ, ಚಿಕ್ಕಮಗಳೂರು, ಕೊಡಗು, ಉಡುಪಿ, ದಕ್ಷಿಣ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ 06 ರೇಷ್ಮೆ ಉಪ ನಿರ್ದೇಶಕರುಗಳ ಪೈಕಿ 01 ರೇಷ್ಮೆ ಉಪ ನಿರ್ದೇಶಕರ ಹುದ್ದೆಯನ್ನು ಯಾದಗಿರಿ ಜಿಲ್ಲೆಗೆ ವರ್ಗಾಯಿಸಲು ಮತ್ತು 03 ರೇಷ್ಮೆ ಉಪ ನಿರ್ದೇಶಕರ ಹುದ್ದೆಗಳನ್ನು ರೇಷ್ಮೆ ನಿರ್ದೇಶನಾಲಯಕ್ಕೆ ಸ್ಥಳಾಂತರಿಸಿ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳಾಗಿ ಉನ್ನತೀಕರಿಸುವುದು. ಇನ್ನುಳಿದ 02 ಹುದ್ದೆಗಳಿಗೆ ರಾಮನಗರ ಮತ್ತು ಚಿಕ್ಕಬಳ್ಳಾಪುರ ಇಲ್ಲಿ Post Cocoon Cellನ್ನು ರಚಿಸಿ ರೇಷ್ಮೆ ಉಪ ನಿರ್ದೇಶಕರುಗಳ ಹುದ್ದೆಗಳನ್ನು ಸ್ಥಳಾಂತರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

ರೇಷ್ಮೆ ಇಲಾಖೆಯಲ್ಲಿ ರೇಷ್ಮೆ ನಿರ್ದೇಶನಾಲಯವು ರಾಜ್ಯ ಮಟ್ಟದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತದೆ. ರೇಷ್ಮೆ ಇಲಾಖೆಯ ಯೋಜನೆ/ಉದ್ದೇಶ/ಕಾರ್ಯಕ್ರಮಗಳ ರೂಪುರೇಷೆಗಳನ್ನು ಸಿದ್ಧಪಡಿಸುವುದು ಅನುಷ್ಠಾನ, ನಿರ್ವಹಣೆ ಮತ್ತು ನಿಯಂತ್ರಣ ಕಾರ್ಯಭಾರವನ್ನು ಹೊಂದಿರುತ್ತದೆ. ರೇಷ್ಮೆ ಕೃಷಿಯ ಅಭಿವೃದ್ಧಿಗಾಗಿ ರೇಷ್ಮೆ ನಿರ್ದೇಶನಾಲಯದಲ್ಲಿ ರೇಷ್ಮೆ ಬೀಜೋತ್ಪಾದನೆ, ರೇಷ್ಮೆ ಕೃಷಿ ಕ್ಷೇತ್ರ ತಾಂತ್ರಿಕ ಸೇವೆಗಳು ಮತ್ತು ತರಬೇತಿಗಳು, ರೇಷ್ಮೆ ಗೂಡು ಮತ್ತು ಗೂಡಿನ ನಂತರದ ಚಟುವಟಿಕೆ ಹಾಗೂ ಯೋಜನೆಗಳ ಅನುಷ್ಠಾನ ಇವುಗಳ ಕುರಿತಂತೆ ತಾಂತ್ರಿಕ ವಿಭಾಗವು ತನ್ನದೆ ಆದ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ. ಯೋಜನಾ ವಿಭಾಗವು ರೇಷ್ಮೆ ಕೃಷಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಯೋಜನಾ ಕಾರ್ಯಕ್ರಮಗಳನ್ನು ಸಿದ್ಧಪಡಿಸಿ ಅವುಗಳ ಅನುಷ್ಠಾನ ಮತ್ತು ನಿರ್ವಹಣೆ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತದೆ.

ರೇಷ್ಮೆ ಬೀಜೋತ್ಪಾದನೆ ಮತ್ತು ರೇಷ್ಮೆ ಕೃಷಿ ಕ್ಷೇತ್ರ ವಿಭಾಗವು ರೇಷ್ಮೆ ಕೃಷಿ ಚಟುವಟಿಕೆಯ ಅಭಿವೃದ್ಧಿಗೆ ಅಗತ್ಯವಿರುವ ರೋಗರಹಿತ ಮೈಸೂರು ತಳಿ, ದ್ವಿತಳಿ ಬಿತ್ತನೆ ಮತ್ತು ಮಿಶ್ರತಳಿ ಮೊಟ್ಟೆ ಉತ್ಪಾದನೆಗೆ ಸಂಬಂಧಿಸಿದಂತೆ ಯೋಜನಾ ಬದ್ಧ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಕ್ರಮಗಳಿಗೆ ಅನುಸಾರವಾಗಿ ಕ್ಷೇತ್ರಮಟ್ಟದ ಸಂಸ್ಥೆಗಳ ಮೂಲಕ ಕಾಲಕಾಲಕ್ಕೆ ಅವಶ್ಯಕತೆಗೆ ಅನುಗುಣವಾಗಿ ರೇಷ್ಮೆ ಬೆಳೆಗಾರರಿಗೆ ರೋಗರಹಿತ ರೇಷ್ಮೆ ಮೊಟ್ಟೆಗಳು ಲೋಪವಿಲ್ಲದೆ ದೊರಕುವಂತೆ ಮಾಡುವ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ. ಜೊತೆಗೆ ರೇಷ್ಮೆ ಕೃಷಿ ಕ್ಷೇತ್ರ ವಿಭಾಗದಲ್ಲಿ ಹಿಪ್ಪುನೇರಳೆಯ ಅಭಿವೃದ್ಧಿಗೆ ಅವಶ್ಯವಿರುವ ವಿವಿಧ ತಳಿಯ ಹಿಪ್ಪುನೇರಳೆ ಕಡ್ಡಿಗಳ ಉತ್ಪಾದನೆ ಜೊತೆಗೆ ರೋಗರಹಿತ ರೇಷ್ಮೆ ಮೊಟ್ಟೆ ಉತ್ಪಾದನೆಗೆ ಅಗತ್ಯವಿರುವ ರೋಗರಹಿತ ರೇಷ್ಮೆ ಗೂಡುಗಳ ಉತ್ಪಾದನೆ ಕಾರ್ಯವನ್ನು ಕ್ಷೇತ್ರಮಟ್ಟದ ಸಂಸ್ಥೆಗಳ ಮೂಲಕ ನಿರ್ದಿಷ್ಟ ಗುರಿ ಸಾಧಿಸುವ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ.

ತಾಂತ್ರಿಕ ಸೇವೆ ಮತ್ತು ತರಬೇತಿ ವಿಭಾಗವು ರೇಷ್ಮೆ ಕೃಷಿಗೆ ಸಂಬಂಧಿಸಿದ ಹೊಸ ಹೊಸ ತಾಂತ್ರಿಕತೆ, ಹೊಸದಾಗಿ ಅಭಿವೃದ್ಧಿ ಪಡಿಸಲಾದ ತಳಿಗಳು ಮತ್ತು ಸೋಂಕು ನಿವಾರಕಗಳನ್ನು ರೇಷ್ಮೆ ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳ ಮೂಲಕ ರೇಷ್ಮೆ ಬೆಳೆಗಾರರಿಗೆ ವ್ಯವಸ್ಥಿತವಾಗಿ ತಲುಪಿಸುವ ಜವಾಬ್ದಾರಿಯುತ ಕಾರ್ಯವನ್ನು ಯೋಜನಾಬದ್ಧವಾಗಿ ಅನುಷ್ಠಾನಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ರೇಷ್ಮೆ ಗೂಡು ಮಾರುಕಟ್ಟೆ ವಿಭಾಗವು ರೇಷ್ಮೆಗೂಡು ಮಾರಾಟಕ್ಕೆ ವ್ಯವಸ್ಥಿತ ಮಾರುಕಟ್ಟೆ ಸೌಲಭ್ಯವನ್ನು ಒದಗಿಸುವುದರೊಂದಿಗೆ ರೇಷ್ಮೆ ಗೂಡಿನ ಉತ್ಪಾದನೆ, ಲಭ್ಯತೆಗೆ ಸಂಬಂಧಿಸಿದಂತೆ ಮುಂದಿನ ಕಾರ್ಯಕ್ರಮ ಮತ್ತು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ. ರೇಷ್ಮೆ ಉದ್ಯಮ ಕೋಶ ವಿಭಾಗವು ಗುಣಮಟ್ಟದ ರೇಷ್ಮೆ ನೂಲಿನ ಉತ್ಪಾದನೆ ಕಡೆ ಗಮನಹರಿಸಿ ರೇಷ್ಮೆ ನೂಲಿಗೆ ವ್ಯವಸ್ಥಿತ ಮಾರಾಟದ ಅವಕಾಶವನ್ನು ಮಾಡಿಕೊಡುವುದರೊಂದಿಗೆ ಕಸುಬುದಾರರಿಗೆ ಅಗತ್ಯವಿರುವ ಸೇವಾ ಸೌಲಭ್ಯಗಳನ್ನು ಒದಗಿಸಲು ಯೋಜಿತ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಕಾರ್ಯವನ್ನು ನಿರ್ವಹಣೆ ಮಾಡುತ್ತಿರುತ್ತದೆ.

ಈ ಎಲ್ಲಾ ವಿಭಾಗಗಳ ಉಸ್ತುವಾರಿಯವನ್ನು ರೇಷ್ಮೆ ಜಂಟಿ ನಿರ್ದೇಶಕರ ಬದಲಾಗಿ ಹಾಲಿ ರೇಷ್ಮೆ ಉಪ ನಿರ್ದೇಶಕರು ನಿರ್ವಹಿಸುತ್ತಿದ್ದಾರೆ. ಜಿಲ್ಲಾ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮತ್ತು ಇತರೆ ಸಂಸ್ಥೆಗಳಾದ ರೇಷ್ಮೆ ಗೂಡಿನ ಮಾರುಕಟ್ಟೆ, ರೇಷ್ಮೆ ಬಿತ್ತನೆ ಕೋಠಿಗಳ ಉಸ್ತುವಾರಿಯನ್ನು ರೇಷ್ಮೆ ಉಪ ನಿರ್ದೇಶಕರು ಹೊಂದಿರುತ್ತಾರೆ. ಇವರುಗಳ ಪ್ರಸ್ತಾವನೆಗಳನ್ನು ವಿಭಾಗೀಯ ರೇಷ್ಮೆ ಜಂಟಿ ನಿರ್ದೇಶಕರುಗಳು ಕೇಂದ್ರ ಕಛೇರಿಗೆ ಸಲ್ಲಿಸುತ್ತಾರೆ. ಈ ಪ್ರಸ್ತಾವನೆಗಳನ್ನು ಮತ್ತೊಮ್ಮೆ ರೇಷ್ಮೆ ಉಪನಿರ್ದೇಶಕರುಗಳು ಪರಿಶೀಲಿಸಿ ಅಭಿಪ್ರಾಯಿಸುವ ಕೆಲಸವನ್ನು ಮಾಡುತ್ತಿರುವುದು ಸರಿಯದ ಕ್ರಮವಲ್ಲ. ತಾಂತ್ರಿಕ ವಿಭಾಗದ ಮುಖ್ಯಸ್ಥರಾದ ಹೆಚ್ಚುವರಿ ನಿರ್ದೇಶಕರ ಮೂಲಕ ಇಲಾಖಾ ಮುಖ್ಯಸ್ಥರಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಮಾಹಿತಿ/ವಿವರವನ್ನು ನೀಡಿ ಕ್ಷೇತ್ರಮಟ್ಟದ ಅಧಿಕಾರಿಗಳಿಗೆ, ಹಿರಿಯ ಅಧಿಕಾರಿಗಳ ತಾಂತ್ರಿಕ ಮಾರ್ಗದರ್ಶನ, ತೀವ್ರ ನಿಗಾ ಮತ್ತು ಪರಿವೀಕ್ಷಣೆ ಕಾರ್ಯವನ್ನು ನಿರ್ವಹಿಸಲು ಈ ಹಿಂದೆ ರೇಷ್ಮೆ ಹೆಚ್ಚುವರಿ ನಿರ್ದೇಶಕರ ಹುದ್ದೆಗಳು ಜೊತೆಗೆ ಯೋಜನೆ ವಿಭಾಗ, ರೇಷ್ಮೆ ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರ ವಿಭಾಗ, ತಾಂತ್ರಿಕ ಸೇವೆಗಳು ಮತ್ತು ತರಬೇತಿ ವಿಭಾಗ ಹಾಗೂ ರೇಷ್ಮೆ ಉದ್ಯಮ ಕೋಶ ವಿಭಾಗಗಳ ಉಸ್ತುವಾರಿಗಾಗಿ ನಾಲ್ಕು ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳು ಕಾರ್ಯ ನಿರ್ವಹಿಸುತ್ತಿದ್ದವು.

ಈ ಪೈಕಿ ಒಂದು ರೇಷ್ಮೆ ಹೆಚ್ಚುವರಿ ನಿರ್ದೇಶಕರ ಹುದ್ದೆಯು ರದ್ದಾಗಿರುತ್ತದೆ ಅಲ್ಲದೆ ರಾಜ್ಯ ರೇಷ್ಮೆ ಇಲಾಖೆಯ ಚಟುವಟಿಕೆಗಳು ಇಡೀ ರಾಜ್ಯದಾದ್ಯಂತ ಪಸರಿಸಿರುವ ಕಾರಣ ಪರಿಣಾಮಕಾರಿಯಾಗಿ ಪರಿವೀಕ್ಷಣೆಯ ಅಗತ್ಯ ಮತ್ತು ವಿಶ್ವಬ್ಯಾಂಕಿಗೆ ನೀಡಿದ ಆಶ್ವಾಸನೆಯಂತೆ ರೇಷ್ಮೆ ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ, ರೇಷ್ಮೆ ಇಲಾಖೆಯ ಕಾರ್ಯ ಚಟುವಟಿಕೆಯನ್ನು ಇತರೆ ಇಲಾಖೆಗಳಂತೆ ಪ್ರಾದೇಶಿಕ ಮಟ್ಟದಲ್ಲಿ ಪುನರ್ ಸಂಘಟಿಸಲು ರೇಷ್ಮೆ ನಿರ್ದೇಶನಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಸಿಐ 14 ಎಸ್‌ಎಲ್‌ಎಸ್ 91, ದಿನಾಂಕ: 10–05–94ರಲ್ಲಿ ಕ್ಷೇತ್ರ ಮಟ್ಟಕ್ಕೆ ಸ್ಥಳಾಂತರಿಸಲಾಗಿರುತ್ತದೆ. ಪ್ರಸ್ತುತ ರೇಷ್ಮೆ ಇಲಾಖೆಯಲ್ಲಿ ಒಂದು ಹೆಚ್ಚುವರಿ ನಿರ್ದೇಶಕರ ಹುದ್ದೆ ಮತ್ತು ಒಂದು

ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಯು ಕಾರ್ಯ ನಿರ್ವಹಿಸುತ್ತಿರುತ್ತದೆ. ಸದರಿ ರೇಷ್ಮೆ ಜಂಟಿ ನಿರ್ದೇಶಕರು ಯೋಜನಾ ವಿಭಾಗದ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. ರೇಷ್ಮೆ ನಿರ್ದೇಶನಾಲಯದಲ್ಲಿ ಉಳಿದ ವಿವಿಧ ತಾಂತ್ರಿಕ ವಿಭಾಗಗಳಾದ 1) ರೇಷ್ಮೆ ಬಿತ್ತನೆ ಕೋಠಿ ಮತ್ತು ರೇಷ್ಮೆ ಕೃಷಿ ಕ್ಷೇತ್ರ, 2) ರೇಷ್ಮೆ ಗೂಡಿನ ಮಾರುಕಟ್ಟೆ ಹಾಗೂ ರೇಷ್ಮೆ ಉದ್ಯಮ ಕೋಶ, 3) ತಾಂತ್ರಿಕ ಸೇವೆ ಮತ್ತು ತರಬೇತಿ ಈ ಮೂರು ವಿಭಾಗಗಳಿಗೆ ಒಂದೊಂದು ರೇಷ್ಮೆ ಜಂಟಿ ನಿರ್ದೇಶಕರ ಸೇವೆಯ ಅವಶ್ಯಕತೆ ಇರುತ್ತದೆ.

ರೇಷ್ಮೆ ಇಲಾಖೆಯಲ್ಲಿ ಹಾಲಿ ಇರುವ 05 ಖಾಯಂ ರೇಷ್ಮೆ ಉಪ ನಿರ್ದೇಶಕರ ಹುದ್ದೆಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳಿಗೆ ಉನ್ನತೀಕರಿಸಬಹುದಾಗಿರುತ್ತದೆ ಎಂದು ಮೇಲೆ ಓದಲಾದ ಪತ್ರಗಳ ಪ್ರಸ್ತಾವನೆಯಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸಿರುತ್ತಾರೆ.

1. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ
2. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಚಾಮರಾಜನಗರ
3. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ರಾಮನಗರ

ಉನ್ನತೀಕರಿಸಲಾಗುವ ಮೇಲ್ಕಂಡ ಹುದ್ದೆಗಳ ಜಾಗಕ್ಕೆ ಈ ಕೆಳಕಂಡ ತಾತ್ಕಾಲಿಕ ರೇಷ್ಮೆ ಉಪ ನಿರ್ದೇಶಕರ ಹುದ್ದೆಗಳನ್ನು ಪರಸ್ಪರ ವರ್ಗಾಯಿಸಬಹುದಾಗಿರುತ್ತದೆ ಎಂದು ತಿಳಿಸುತ್ತಾ, ಸೂಕ್ತ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸಿರುತ್ತಾರೆ.

1. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಉಡುಪಿ
2. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಮಂಗಳೂರು
3. ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಕೊಡಗು

ಉನ್ನತೀಕರಿಸಲಾದ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ರೇಷ್ಮೆ ನಿರ್ದೇಶನಾಲಯದಲ್ಲಿ ಈ ಕೆಳಕಂಡ ವಿಭಾಗಗಳಿಗೆ ಹಂಚಿಕೆ ಮಾಡಬಹುದಾಗಿರುತ್ತದೆ ಎಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸಿರುತ್ತಾರೆ.

1. ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರ ವಿಭಾಗ
2. ತಾಂತ್ರಿಕ ಸೇವೆಗಳು ಮತ್ತು ತರಬೇತಿ ವಿಭಾಗ
3. ರೇಷ್ಮೆ ಗೂಡು ಮಾರುಕಟ್ಟೆಗಳು ಮತ್ತು ಗೂಡಿನ ನಂತರದ ಚಟುವಟಿಕೆ ವಿಭಾಗ

ಮೇಲಿನ 03 ಜಿಲ್ಲೆಗಳ ತಾತ್ಕಾಲಿಕ ಮತ್ತು ಖಾಯಂ ರೇಷ್ಮೆ ಉಪ ನಿರ್ದೇಶಕರ ಹುದ್ದೆಗಳನ್ನು ಪರಸ್ಪರ ವರ್ಗಾವಣೆಗೊಳಿಸಿ, ನಂತರ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸಿ, ಸದರಿ ಉನ್ನತೀಕರಿಸಿದ 03 ರೇಷ್ಮೆ ಜಂಟಿ ನಿರ್ದೇಶಕರುಗಳ ಹುದ್ದೆಗಳನ್ನು ರೇಷ್ಮೆ ನಿರ್ದೇಶನಾಲಯಕ್ಕೆ ಸ್ಥಳಾಂತರಿಸಿ, ಸೂಕ್ತ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯ 05 ಖಾಯಂ ರೇಷ್ಮೆ ಉಪ ನಿರ್ದೇಶಕರ ಹುದ್ದೆಗಳ ಪೈಕಿ 03 ಖಾಯಂ ಹುದ್ದೆಗಳನ್ನು ತಾತ್ಕಾಲಿಕ ಹುದ್ದೆಗಳಾಗಿ ಪರಸ್ಪರ ವರ್ಗಾಯಿಸಿ, ಸದರಿ ಖಾಯಂ 03 ಹುದ್ದೆಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ತಾತ್ಕಾಲಿಕವಾಗಿ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳಿಗೆ (ವೇತನ ಶ್ರೇಣಿ ₹. 40050-56550) ಗಳಿಗೆ ಉನ್ನತೀಕರಿಸಿ, ಸದರಿ ಹುದ್ದೆಗಳನ್ನು ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇಲ್ಲಿನ (1) ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರ ವಿಭಾಗ, (2) ತಾಂತ್ರಿಕ ಸೇವೆಗಳು ಮತ್ತು ತರಬೇತಿ ವಿಭಾಗ, (3) ರೇಷ್ಮೆ ಗೂಡು ಮಾರುಕಟ್ಟೆಗಳು ಮತ್ತು ಗೂಡಿನ ನಂತರದ ಚಟುವಟಿಕೆ ವಿಭಾಗಗಳಿಗೆ ಗುರುತಿಸಿ, ಮರು ಹಂಚಿಕೆ ಮಾಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 02 ರೇಸೇವಿ 2016, ಬೆಂಗಳೂರು, ದಿನಾಂಕ 22-04-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೇಷ್ಮೆ ಇಲಾಖೆಯ 05 ಖಾಯಂ ರೇಷ್ಮೆ ಉಪ ನಿರ್ದೇಶಕರುಗಳ ಹುದ್ದೆಗಳ ಪೈಕಿ 03 ಹುದ್ದೆಗಳನ್ನು ತಾತ್ಕಾಲಿಕ ಹುದ್ದೆಗಳನ್ನಾಗಿ ಪರಿವರ್ತಿಸಿ ಈ ಕೆಳಕಂಡಂತೆ ಪರಸ್ಪರ ವರ್ಗಾಯಿಸಿ ಆದೇಶಿಸಲಾಗಿದೆ:

| ಕ್ರ.ಸಂ. | ಪರಸ್ಪರ ವರ್ಗಾವಣೆ ನಂತರದ ಖಾಯಂ ಹುದ್ದೆಗಳು | ಪರಸ್ಪರ ವರ್ಗಾವಣೆ ನಂತರ ತಾತ್ಕಾಲಿಕ ಹುದ್ದೆಗಳು |
|---|---|---|
| 1 | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಉಡುಪಿ | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಚಾಮರಾಜನಗರ |
| 2 | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮಂಗಳೂರು | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್ ಚಿಕ್ಕಬಳ್ಳಾಪುರ |
| 3 | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಕೊಡಗು | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ರಾಮನಗರ |

ಮೇಲಿನಂತೆ ಪರಸ್ಪರ ವರ್ಗಾವಣೆಯಾಗಿ ಖಾಯಂಗೊಂಡ ಉಡುಪಿ, ಮಂಗಳೂರು ಮತ್ತು ಕೊಡಗು ಇಲ್ಲಿನ 03 ಖಾಯಂ ರೇಷ್ಮೆ ಉಪ ನಿರ್ದೇಶಕರುಗಳ ಹುದ್ದೆಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ತಾತ್ಕಾಲಿಕವಾಗಿ ರೇಷ್ಮೆ ಜಂಟಿ ನಿರ್ದೇಶಕರ ಹುದ್ದೆಗಳಿಗೆ (ವೇತನ ಶ್ರೇಣಿ ₹.40,050-56550) ಉನ್ನತೀಕರಿಸಿ ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇಲ್ಲಿನ ಈ ಕೆಳಕಂಡ ವಿಭಾಗಗಳಿಗೆ ಹಂಚಿಕೆ ಮಾಡಿ ಸರ್ಕಾರವು ಆದೇಶಿಸಿದೆ.

01. ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರ ವಿಭಾಗ

02. ತಾಂತ್ರಿಕ ಸೇವೆಗಳು ಮತ್ತು ತರಬೇತಿ ವಿಭಾಗ

03. ರೇಷ್ಮೆ ಗೂಡು ಮಾರುಕಟ್ಟೆಗಳು ಮತ್ತು ಗೂಡಿನ ನಂತರದ ಚಟುವಟಿಕೆ ವಿಭಾಗ

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 123 ಸೇ–3/16, ದಿನಾಂಕ 18–02–2016ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಲ್ ಚಿನ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ, (ರೇಷ್ಮೆ)

ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

P.R.333

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬಿಆರ್‌ಟಿಎಸ್ ಯೋಜನೆ ಅಡಿಯಲ್ಲಿ ಅಭಿವೃದ್ಧಿ ಪಡಿಸಿದ ಮಾರ್ಗಕ್ಕೆ ಹೊಂದಿಕೊಂಡಿರುವ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ಕುಡಿಯುವ ನೀರು ಸರಬರಾಜು ಮುಖ್ಯ ಕೊಳವೆ ಮಾರ್ಗವನ್ನು ಸ್ಥಳಾಂತರಿಸುವ ಕುರಿತಂತೆ ಒಂದೇ ಕಂತಿನ ತಿರುವಳಿಯಲ್ಲಿ ಸಂಗ್ರಹವಾಗಿರುವ ಪಾಲಿಕೆಯ ನೀರು ಸರಬರಾಜು ನಿಧಿಯಿಂದ ಅನುದಾನವನ್ನು ಬಿಡುಗಡೆ ಮಾಡಲು ಅನುಮತಿಯನ್ನು ನೀಡುವ ಕುರಿತು.

**ಉಲ್ಲೇಖ:**
1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರ ಪತ್ರ ಸಂಖ್ಯೆ: ವ್ಯನಿ/ಮುಅ/ತಾಸ–3/ಸ–5/2015–16/157/ ದಿನಾಂಕ 28–04–2015, 29–07–2015, 16–09–2015 ಮತ್ತು 23–12–2015.
2) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ ಇವರ ಪತ್ರದ ಸಂಖ್ಯೆ: ಎಚ್‌ಡಿಎಂಸಿ/ ಡಿಯುಎಲ್‌ಟಿ/2015–16/761, ದಿನಾಂಕ: 08–09–2015.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರು ಹುಬ್ಬಳ್ಳಿ–ಧಾರವಾಡ ಅವಳಿ ನಗರವು ಕರ್ನಾಟಕ ರಾಜ್ಯದ ಎರಡನೇ ಅತೀ ದೊಡ್ಡ ನಗರವಾಗಿದೆ. ಧಾರವಾಡ ನಗರವು ಜಿಲ್ಲಾ ಕೇಂದ್ರವಾಗಿದ್ದು, ರಾಜ್ಯದ ರಾಜಧಾನಿ, ಬೆಂಗಳೂರಿನಿಂದ 400 ಕಿಮೀ ದೂರದಲ್ಲಿರುತ್ತದೆ. ಅವಳಿ ನಗರಗಳು ಉತ್ತರ ಕರ್ನಾಟಕದ ವಾಣಿಜ್ಯ ಕೃಷಿ ಹಾಗೂ ಶೈಕ್ಷಣಿಕ ಕೇಂದ್ರವಾಗಿರುತ್ತದೆ. ಹುಬ್ಬಳ್ಳಿ ಮತ್ತು ಧಾರವಾಡ ನಗರಗಳು ಪೂನಾ–ಬೆಂಗಳೂರು ರಸ್ತೆ ಮೂಲಕ ಸಂಪರ್ಕ ಹೊಂದಿರುತ್ತದೆ. ಹೆಚ್‌ಡಿಬಿಆರ್‌ಟಿಎಸ್ ಕಂಪನಿ/ ಮೆ॥ ಕೆಆರ್‌ಡಿಸಿಎಲ್ ಪ್ರಾಧಿಕಾರಗಳು ಸದರಿ ಪೂನಾ–ಬೆಂಗಳೂರು ರಸ್ತೆಯನ್ನು ಚತುಷ್ಪಥ ರಸ್ತೆಯನ್ನಾಗಿ ಮಾರ್ಪಡಿಸುವ ಕಾಮಗಾರಿಯನ್ನು ಕೈಗೊಂಡಿರುತ್ತದೆ.

ಪ್ರಸ್ತಾಪಿತ ಚತುಷ್ಪಥ ರಸ್ತೆಯ ಅಗಲದ ಒಳಗೆ, ಈ ಹಿಂದೆ ಅಳವಡಿಸಲಾಗಿದ್ದು, ಹುಬ್ಬಳ್ಳಿ–ಧಾರವಾಡ ನಗರಗಳ ನೀರು ಸರಬರಾಜು ವ್ಯವಸ್ಥೆಯ ಮುಖ್ಯ ಹಾಗೂ ವಿತರಣಾ ಕೊಳವೆ ಮಾರ್ಗಗಳು ಬರುತ್ತದೆ. ಆದುದರಿಂದ, ಹೆಚ್‌ಡಿಬಿಆರ್‌ಎಸ್ ಕಂಪನಿಯು ಸರಪಳಿ 12.650 ಕಿಮೀ.ನಿಂದ 16.460 ಕಿಮೀ (ಹಂತ–2) ರಲ್ಲಿ ಹಾಲಿ ಇರುವ ನೀರು ಸರಬರಾಜು ಕೊಳವೆ ಮಾರ್ಗಗಳನ್ನು ಸ್ಥಳಾಂತರಿಸಲು ಅಂದಾಜು ಪಟ್ಟಿಯನ್ನು 2014–15ನೇ ಸಾಲಿನ ಮಂಡಳಿಯ, ಲೋಕೋಪಯೋಗಿ ದರಪಟ್ಟಿ ಹಾಗೂ ದರಪಟ್ಟಿಯಲ್ಲಿಲ್ಲದ ಕಾಮಗಾರಿಗಳಿಗೆ ಮಾರುಕಟ್ಟೆ ದರಗಳಿಗೆ ಅನುಗುಣವಾಗಿ ಅಂದಾಜು ಮೊತ್ತ ₹.19.88 ಕೋಟಿಗಳಿಗೆ ಸಿದ್ಧಪಡಿಸಿ. ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೊಳ್ಳಲು ಯೋಜಿಸಲಾಗಿದ್ದು, ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | |
|---|---|---|
| 1) | ಹೆಚ್‌ಡಿಬಿಆರ್‌ಟಿಎಸ್ ಕಂ. ಪಾಲು | ₹.10.00 ಕೋಟಿ |
| 2) | ಕರ್ನಾಟಕ ಸರ್ಕಾರದ ಅನುದಾನ | ₹. 9.88 ಕೋಟಿ |
| | **ಒಟ್ಟು** | **₹.19.88 ಕೋಟಿ** |

ಮೇಲೆ ಓದಲಾದ ಕ್ರಮಾಂಕ (2) ರಲ್ಲಿನ ಪತ್ರದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ಇವರು ಹುಬ್ಬಳ್ಳಿ–ಧಾರವಾಡ ಅವಳಿ ನಗರದಲ್ಲಿರುವ ಪಿ.ಬಿ. ರಸ್ತೆಯನ್ನು ಚತುಷ್ಪಥ ರಸ್ತೆಯನ್ನಾಗಿ ಪರಿವರ್ತಿಸಲು ರಸ್ತೆಯ ಅಗಲೀಕರಣ ಕಾಮಗಾರಿಯನ್ನು ಬಿ.ಆರ್.ಟಿ.ಎಸ್. ಯೋಜನೆಯಡಿ ಪ್ರಗತಿಯಲ್ಲಿರುತ್ತದೆ. ಮಹಾನಗರ ಪಾಲಿಕೆ ಸಾಮಾನ್ಯ ಸಭೆಯ ಠರಾವು ಸಂಖ್ಯೆ 293, ದಿನಾಂಕ: 30–06–2015 ರಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯಲ್ಲಿ ಒಂದೇ ಕಂತಿನ ತೀರುವಳಿಯಲ್ಲಿ (One Time settlement) ಸಂಗ್ರಹವಾಗಿರುವ ಪಾಲಿಕೆ ನೀರು ಸರಬರಾಜು ನಿಧಿ ₹.10.00 ಕೋಟಿಯಲ್ಲಿ ₹.5.00 ಕೋಟಿ ಹಣವನ್ನು ಹುಬ್ಬಳ್ಳಿ–ಧಾರವಾಡ ಬಿ.ಆರ್.ಟಿ.ಎಸ್. ಕಂಪನಿ ಲಿ., ಇವರಿಗೆ ಹಣವನ್ನು ಬಿಡುಗಡೆ ಮಾಡಲು ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯು ಬಿ.ಆರ್.ಟಿ.ಎಸ್ ಯೋಜನೆಯ ಮಾರ್ಗ ಮಧ್ಯದಲ್ಲಿ ಹೊಂದಿಕೊಂಡಿರುವ ಮಲಪ್ರಭಾ ಮುಖ್ಯ ಕೊಳವೆ ಮಾರ್ಗಗಳನ್ನು ಸ್ಥಳಾಂತರಿಸುವ ಕಾಮಗಾರಿಯನ್ನು ಕೈಗೊಳ್ಳಲು ತಗಲುವ ವೆಚ್ಚ (ಹಂತ–1 ₹.1551.00 ಲಕ್ಷಗಳು ಹಾಗೂ ಹಂತ 2 ಮತ್ತು 3 ₹.2537.00 ಲಕ್ಷಗಳು) ₹.40.88 ಕೋಟಿಗಳಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ವಂತಿಕೆಯಾಗಿ ₹.5.00 ಕೋಟಿ ಹಣವನ್ನು ಒಂದೇ ಕಂತಿನ ತೀರುವಳಿಯಲ್ಲಿ (One Time settlement) ಸಂಗ್ರಹವಾಗಿರುವ ಅನುದಾನದಲ್ಲಿ ₹.5.00 ಕೋಟಿ ಹಣವನ್ನು ಹುಬ್ಬಳ್ಳಿ–ಧಾರವಾಡ ಬಿಆರ್‌ಟಿಎಸ್ ಕಂ.ಲಿ., ರವರಿಗೆ ಹಣವನ್ನು ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 26 ಯುಡಬ್ಲ್ಯೂಎಸ್ 2015, ಬೆಂಗಳೂರು, ದಿನಾಂಕ: 28–04–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯು ಬಿ.ಆರ್.ಟಿ.ಎಸ್ ಯೋಜನೆಯ ಮಾರ್ಗ ಮಧ್ಯದಲ್ಲಿ ಹೊಂದಿಕೊಂಡಿರುವ ಮಲಪ್ರಭಾ ಮುಖ್ಯ ಕೊಳವೆ ಮಾರ್ಗಗಳನ್ನು ಸ್ಥಳಾಂತರಿಸುವ ಕಾಮಗಾರಿಯನ್ನು ಕೈಗೊಳ್ಳಲು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ವಂತಿಕೆಯಾಗಿ ₹.5.00 ಕೋಟಿ ಹಣವನ್ನು ಒಂದೇ ಕಂತಿನ ತೀರುವಳಿಯಲ್ಲಿ (One Time settlement) ಸಂಗ್ರಹವಾಗಿರುವ ಅನುದಾನದಲ್ಲಿ ₹.5.00 ಕೋಟಿ ಹಣವನ್ನು ಹುಬ್ಬಳ್ಳಿ–ಧಾರವಾಡ ಬಿಆರ್‌ಟಿಎಸ್ ಕಂ.ಲಿ., ರವರಿಗೆ ಹಣವನ್ನು ಬಿಡುಗಡೆ ಮಾಡಲು ಸರ್ಕಾರವು ಅನುಮೋದನೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾಗರಾಜ,**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ (ಮಂಡಳಿ) (ಪ್ರ).

**P.R.334**

## ಇಂಧನ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಸೌರಶಕ್ತಿ ಯೋಜನೆಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ (ಕೆ.ಆರ್.ಇ.ಡಿ.ಎಲ್) ರಿಂದ ಅನುಷ್ಠಾನ ಕುರಿತು.

**ಓದಲಾಗಿದೆ:**

1. ಆಯವ್ಯಯ 2016–17ರಲ್ಲಿ ಕಂಡಿಕೆ 346 ರಂತೆ ಇಂಧನ ಇಲಾಖೆಗೆ ಒದಗಿಸಿರುವ ಅನುದಾನದಡಿ.
2. ಕೆ.ಆರ್.ಇ.ಡಿ.ಎಲ್ ರವರ ಪತ್ರ ಸಂಖ್ಯೆ: KREDL/07/SOG–2/07/2016/1266, ದಿನಾಂಕ: 26.03.2016.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 54 ವಿಎಸ್ ಸಿ 2014, ದಿನಾಂಕ: 28.02.2015.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ವಿಎಸ್ ಸಿ 2016, ದಿನಾಂಕ; 22.01.2016.

**ಪ್ರಸ್ತಾವನೆ :**

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಮೇಲೆ ಓದಲಾದ 3) ರ ಸರ್ಕಾರದ ಆದೇಶದಂತೆ 5 (ಐದು) ಹೆಚ್. ಪಿ. ಸಾಮರ್ಥ್ಯದ ಜಾಲಮುಕ್ತ ಸೌರಶಕ್ತಿ ಆಧಾರಿತ ನೀರಾವರಿ ಪಂಪ್‌ಸೆಟ್‌ನ್ನು ವಿತರಿಸುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಈ ಯೋಜನೆಯಡಿ ಪ್ರಾಯೋಗಿಕವಾಗಿ 9 ತಾಲ್ಲೂಕುಗಳಲ್ಲಿ ಒಟ್ಟು 1009 ಸಂಖ್ಯೆಯ ಸೋಲಾರ ಪಂಪ್‌ಸೆಟ್‌ಗಳನ್ನು ಅಳವಡಿಸುವ ಕಾರ್ಯ ಪ್ರಗತಿಯಲ್ಲಿದೆ. ಈ ಯೋಜನೆಯಡಿ ಸಾಮಾನ್ಯ ವರ್ಗದ ಫಲಾನುಭವಿಗಳಿಗೆ ₹.1 (ಒಂದು ) ಲಕ್ಷ ವಂತಿಗೆಯೊಂದಿಗೆ ಹಾಗೂ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಫಲನುಭವಿಗಳಿಗೆ ಯಾವುದೇ ವಂತಿಗೆ ಇಲ್ಲದೆ ಸೌರಶಕ್ತಿ ಚಾಲಿತ ನೀರಾವರಿ ಪಂಪ್ ಸೆಟ್‌ಗಳನ್ನು ವಿತರಿಸಲಾಗುತ್ತಿದೆ. ಈ ಯೋಜನೆಯಡಿ ಕೆಆರ್‌ಇಡಿಎಲ್ ಸಂಸ್ಥೆಯಿಂದ ಮಾರ್ಚ್ 2016 ಅಂತ್ಯಕ್ಕೆ –232 ಸಂಖ್ಯೆಯ ಸೋಲಾರ್ ಪಂಪ್ ಸೆಟ್‌ಗಳನ್ನು ಅಳವಡಿಸಲಾಗಿರುತ್ತದೆ.

ಮೇಲೆ ಓದಲಾದ (4) ರಂತೆ 2015–16 ಸಾಲಿನಲ್ಲಿ ಕ್ರೆಡಲ್ ಸಂಸ್ಥೆಗೆ ಮುಂದುವರೆದ ಯೋಜನೆಗಾಗಿ ಸೌರಶಕ್ತಿ ಚಾಲಿತ ನೀರಾವರಿ ಪಂಪ್ ಸೆಟ್‌ಗಳನ್ನು ರೈತರಿಗೆ ವಿತರಿಸಲು ₹ 15 (ಹದಿನೈದು) ಕೋಟಿಗಳನ್ನು ನೀಡಲಾಗಿದ್ದು, ಇದರ ಜೊತೆಗೆ 2013–14 ಮತ್ತು 2014–15 ರಲ್ಲಿ ಉಳಿಕೆಯಾದ ₹.4.44 ಕೋಟಿ ಅನುದಾನವನ್ನು ಸೇರಿಸಿ ಒಟ್ಟು ₹.19.44 ಕೋಟಿಗಳ ಮೊತ್ತದಲ್ಲಿ 750 ಸಂಖ್ಯೆಯ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್ ಸೆಟ್‌ಗಳನ್ನು ಒದಗಿಸುವ ಯೋಜನೆಗೆ ಅನುಮೋದನೆ ನೀಡಲಾಗಿರುತ್ತದೆ. ಈಗಾಗಲೇ ಕೆಆರ್‌ಇಡಿಎಲ್ ಸಂಸ್ಥೆಯಿಂದ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗಿದೆ.

ಸೋಲಾರ್ ಉತ್ಪಾದನೆಯನ್ನು ಪ್ರೋತ್ಸಾಹಿಸುವ ಸಲುವಾಗಿ ಸರ್ಕಾರವು ಇಂಧನ ಇಲಾಖೆಗೆ, 2016–17 ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು (ಸಂಪುಟ–VII) ರಡಿಯ ಲೆಕ್ಕ ಶೀರ್ಷಿಕೆ 2801–80–800–1–08 ರಂತೆ ಸೋಲಾರ್ ಯೋಜನೆಗಳ ಅನುಷ್ಠಾನಕ್ಕೆ ಒಟ್ಟು ₹.20.00 (SCSP-₹. 3.43, TSP-₹.1.39 ಮತ್ತು General-₹.15.18) ಕೋಟಿಗಳನ್ನು ಒದಗಿಸಿದೆ.

2016–17ನೇ ಸಾಲಿನ ಆಯವ್ಯಯದಲ್ಲಿ ಮೀಸಲಿರಿಸಿರುವ ₹.20.00 ಕೋಟಿಗಳನ್ನು, ಈಗಾಗಲೇ ಮೇಲೆ ಓದಲಾದ (4) ರಲ್ಲಿ ಕೆ.ಆರ್.ಇ.ಡಿ.ಎಲ್ ವತಿಯಿಂದ ಜಾರಿಯಲ್ಲಿರುವ ಸೌರಶಕ್ತಿ ಆಧಾರಿತ ಜಾಲಮುಕ್ತ ನಿರಾವರಿ ಪಂಪ್ ಸೆಟ್‌ಗಳನ್ನು ಒದಗಿಸುವ ಯೋಜನೆಯನ್ನು ಮುಂದುವರೆಸಲು ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್ ರವರು ಮೇಲೆ ಓದಲಾದ (2)ರ ಪತ್ರದಂತೆ ಕೋರಿರುತ್ತಾರೆ. ಈ ಮೊತ್ತಕ್ಕೆ (₹.20.00 ಕೋಟಿಗಳಿಗೆ) ಒಟ್ಟು 780 ಸಂಖ್ಯೆಯ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಇದರಂತೆ ಇಂಧನ ಇಲಾಖೆಗೆ ಸೌರ ವಿದ್ಯುತ್ ಯೋಜನೆಗಳಿಗಾಗಿ ಒದಗಿಸಿರುವ ₹.20.00 ಕೋಟಿಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ (ಕೆ.ಆರ್.ಇ.ಡಿ.ಎಲ್)ದ ಮುಂದುವರೆದ ಯೋಜನೆಯಾದ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸುವ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲು ಈ ಕೆಳಗಿನಂತೆ ಆದೇಶ.

ಸದರಿ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 17 ವಿಎಸ್ಇ 2016, ಬೆಂಗಳೂರು, ದಿನಾಂಕ: 23.04.2016.**

2016–17ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2801–80–800–1–08 ರಂತೆ ಸೋಲಾರ್ ಯೋಜನೆಗಳ ಅನುಷ್ಠಾನಕ್ಕೆ ಇಂಧನ ಇಲಾಖೆಗೆ ಒದಗಿಸಿರುವ ₹.20.00 (SCSP-₹.3.43, TSP-₹.1.39 ಮತ್ತು General-₹.15.18) ಕೋಟಿಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ

ನಿಯಮಿತ (ಕೆ.ಆರ್.ಇ.ಡಿ.ಎಲ್)ದ ಮುಂದುವರೆದ ಯೋಜನೆಯಾದ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸುವ ಕ್ರಿಯಾ ಯೋಜನೆಗೆ ಈ ಕೆಳಕಂಡ ಷರತ್ತು /ನಿಬಂಧನೆಗೊಳಪಡಿಸಿ, ಅನುಮೋದನೆ ನೀಡಿ ಆದೇಶಿಸಿದೆ.

- ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು KTPP ಅಧಿನಿಯಮದನ್ವಯ ಮುಂದಿನ ಕ್ರಮ ಜರುಗಿಸುವುದು.
- ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸಲು ಫಲಾನುಭವಿಗಳ ಆಯ್ಕೆ ಮತ್ತು ಮಾನದಂಡನೆಗಳ ಕುರಿತು ವಿವರವಾದ ಕಾರ್ಯತಂತ್ರ ಯೋಜನೆಯನ್ನು ಕೆ.ಆರ್.ಇ.ಡಿ.ಎಲ್ ಸಂಸ್ಥೆಯು ವಿದ್ಯುತ್ ವಿತರಣಾ ಕಂಪನಿಗಳ ಸಹಯೋಗದೊಂದಿಗೆ ಸಿದ್ಧಪಡಿಸಿ, ಕೂಡಲೇ ಇಂಧನ ಇಲಾಖೆಗೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಶ್ವನಾಥ ಪಿ. ಹಿರೇಮಠ,**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

**P.R.335**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಲ್.ಎನ್. ಮೋಹನ್ ಕುಮಾರ್, ಅಬಕಾರಿ ಜಂಟಿ ಆಯುಕ್ತರು (ಚಾ&ತ) ಬೆಂಗಳೂರು ಹಾಗೂ ಅಂದಿನ ಅಬಕಾರಿ ಉಪ ಆಯುಕ್ತರು, ಬೆಂಗಳೂರು ನಗರ (ಪೂರ್ವ)ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಆಇ/48/ಇಪಿಎಸ್/2012, ದಿ: 19.05.2012
2) ಸರ್ಕಾರದ ಆದೇಶ ಸಂಖ್ಯೆ: ಆಇ/48/ಇಪಿಎಸ್/2012, (ಭಾಗ–2) ದಿ: 02.07.2012,
3) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ (ಜಿ) ಸಿಟಿ/ಕ್ರೈಂ.24/ 2012, ದಿನಾಂಕ: 26.12.2015.

**ಪ್ರಸ್ತಾವನೆ :**

ಕರ್ನಾಟಕ ಲೋಕಾಯುಕ್ತ ಪೊಲೀಸರು, ದಿನಾಂಕ; 22.03.2011 ರಂದು ಶ್ರೀ ಎಲ್.ಎನ್. ಮೋಹನ್‌ಕುಮಾರ್, ಅಂದಿನ ಅಬಕಾರಿ ಉಪ ಆಯುಕ್ತರು, ಬೆಂಗಳೂರು ನಗರ ಜಿಲ್ಲೆ (ಪೂರ್ಣ) ರವರ ಕಛೇರಿಯನ್ನು ಶೋಧನೆ ನಡೆಸಿದಾಗ ಇವರ ಆಂಟಿ ಛೇಂಬರ್‌ನಲ್ಲಿ ₹.25,200/– ನಗದು ಮತ್ತು ಮದ್ಯದ ಬಾಟಲಿಗಳು ದೊರೆತಿದ್ದು ಇದಕ್ಕೆ ಸಮರ್ಪಕ ವಿವರಣೆ ನೀಡದ ಕಾರಣ, ನಗದು ಮತ್ತು ಮದ್ಯದ ಬಾಟಲಿಗಳೊಂದಿಗೆ ಆರೋಪಿತ ಅಧಿಕಾರಿಯನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನದಲ್ಲಿರಿಸಿದ ಮೇರೆಗೆ ಅವರನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 19.05.2012ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ಸದರಿ ಅಧಿಕಾರಿಯವರು ಅಮಾನತ್ತಿನ ಆದೇಶವನ್ನು ಪ್ರಶ್ನಿಸಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮುಂದೆ ಮತ್ತು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಿದ್ದು, ರಿಟ್ ಅರ್ಜಿ ಸಂಖ್ಯೆ: 21136/2012 ರಲ್ಲಿ ದಿನಾಂಕ: 26/06/2012 ರಂದು ನೀಡಿರುವ ಮಧ್ಯಂತರ ತೀರ್ಪಿನಲ್ಲಿ order of suspension passed by the respondent is suspended in its entirety until further orders ಎಂದು ಆದೇಶಿಸಿತು. ಈ ಆದೇಶವನ್ನು ಅನುಷ್ಠಾನಗೊಳಿಸಿ ಮೇಲೆ (2) ರಲ್ಲಿ ಓದಲಾದ ದಿನಾಂಕ: 02.07.2012ರ ಸರ್ಕಾರದ ಆದೇಶದಲ್ಲಿ ಅವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಅಬಕಾರಿ ಉಪ ಆಯುಕ್ತರು, ಬೆಂಗಳೂರು (ಪೂರ್ವ) ಜಿಲ್ಲೆಗೆ ನೇಮಿಸಲಾಯಿತು. ತರುವಾಯ ಸರ್ಕಾರದಿಂದ ಶ್ರೀ ಎಲ್.ಎನ್. ಮೋಹನ್ ಕುಮಾರ್, ಅಬಕಾರಿ ಉಪ ಆಯುಕ್ತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಿದ ಮೇರೆಗೆ ಕರ್ನಾಟಕ ಲೋಕಯುಕ್ತ ಪೊಲೀಸರು ಕ್ರೈ. ಸಂ. 24/2012ರಲ್ಲಿ ಬೆಂಗಳೂರು ನಗರ ಜಿಲ್ಲೆಯ Special Judge, Prevention of Corruption Act ನ್ಯಾಯಾಲಯದಲ್ಲಿ ದೋಷಾರೋಪಣೆ ಸಲ್ಲಿಸಿದರು. ಇದನ್ನು ಪ್ರಶ್ನಿಸಿ ಶ್ರೀ ಎಲ್.ಎನ್. ಮೋಹನ್‌ಕುಮಾರ್ ಅವರು ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಕ್ರಿಮಿನಲ್ ಪಿಟಿಷನ್ ನಂ: 6431/2014 ರಲ್ಲಿ ಪ್ರಶ್ನಿಸಲಾಗಿ ಈ ಅರ್ಜಿಯಲ್ಲಿ ರಾಜ್ಯ ಉಚ್ಚನ್ಯಾಯಾಲಯವು ದಿನಾಂಕ: 29.01.2014 ರಂದು ಈ ಕೆಳಕಂಡಂತೆ ತೀರ್ಪು ನೀಡಿತು.

........................................................................................................................................................................

> The Proceedings in Crime No. 24/2012 for the offences punishable under Section 13 (1) (d) r/w section 13 (2) of the Prevention of Corruption Act, 1988 and section 34 of the Excise Act, 1965 on the file of Court of the Special Judge, Prevention of Corruption Act, Bengaluru Urban District, Bengaluru City are hereby quashed ."

ಮೇಲೆ (3) ರಲ್ಲಿ ಓದಲಾದ ದಿನಾಂಕ: 26.12.2015ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಕ್ರಿಮಿನಲ್ ಪಿಟಿಷನ್ ಸಂ: 6431/2014 ರಲ್ಲಿ ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರುವ ಬಗ್ಗೆ ನಿರ್ಧರಿಸಿರುವುದಾಗಿ ತಿಳಿಸಿದ್ದಾರೆ. ಉಚ್ಚ ನ್ಯಾಯಾಲಯದ ದಿನಾಂಕ: 29.01.2014ರ ತೀರ್ಪಿನ ಹಿನ್ನೆಲೆಯಲ್ಲಿ ಆರೋಪಿಯ ವಿರುದ್ಧ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ದೋಷಾರೋಪಣಾ ಪಟ್ಟಿಯ ವಿಚಾರಣೆಯು ರದ್ದುಗೊಂಡಿರುವುದರಿಂದ ಈ ಅಧಿಕಾರಿಯ ಅಮಾನತ್ತಿನ ಅವಧಿಯನ್ನು ಇತ್ಯರ್ಥಪಡಿಸುವ ಕುರಿತು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 48 ಇಪಿಎಸ್ 2012, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್, 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಎಲ್.ಎನ್. ಮೋಹನ್ ಕುಮಾರ್, ಅಬಕಾರಿ ಜಂಟಿ ಆಯುಕ್ತರು (ಜಾ&ತ), ಬೆಂಗಳೂರು ವಿಭಾಗ ಇವರು ದಿನಾಂಕ: 19.05.2012 ಹಾಗೂ 02.07.2012ರ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ, 100(4) ರನ್ವಯ ಎಲ್ಲಾ ಉದ್ದೇಶಗಳಿಗಾಗಿ ಕರ್ತವ್ಯದ ಅವಧಿ ಎಂದು ಪರಿಗಣಿಸಿದೆ. ಈ ಅವಧಿಯಲ್ಲಿ ಶ್ರೀ ಎಲ್. ಎನ್. ಮೋಹನ್ ಕುಮಾರ್ ಅವರು ಅಮಾನತ್ತಿನಲ್ಲಿ ಇರದೇ ಇದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೆಂಕಟೇಶ್. ಜಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ).

P.R.336

## ಆರ್ಥಿಕ ಸಚಿವಾಲಯ

**ವಿಷಯ :** ಹುಚ್ಚು ಪ್ರಾಣಿ ಕಡಿತಕ್ಕೆ ಒಳಪಟ್ಟ ಸರ್ಕಾರಿ ನೌಕರರ ಪ್ರಕರಣಗಳಲ್ಲಿ ವಿಶೇಷ ಸಾಂದರ್ಭಿಕ ರಜೆಯನ್ನು ನಿಯತಗೊಳಿಸುವ ಕುರಿತು.

**ಓದಲಾಗಿದೆ:** ಜಿಲ್ಲಾ ಶಸ್ತ್ರಚಿಕಿತ್ಸಕರು, ತಿಲಕ್ ನಗರ, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರ ಸಂಖ್ಯೆ: ಜಿ.ಶ.ಕ.ಮೈ/[1] 304/2015–16, ದಿನಾಂಕ: 22–01–2016.

**ಪ್ರಸ್ತಾವನೆ :**

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ಅನುಬಂಧ–ಬಿ ಯಲ್ಲಿನ ನಿಯಮ–5 ರಲ್ಲಿ ಹುಚ್ಚು ಪ್ರಾಣಿ ಕಡಿತಕ್ಕೆ ಒಳಪಟ್ಟ ಸರ್ಕಾರಿ ನೌಕರನಿಗೆ ಅವನು ಚಿಕಿತ್ಸೆ ಪಡೆಯುವುದಕ್ಕಾಗಿ ಹೋಗಲು ಎಂದರೆ ಚಿಕಿತ್ಸೆಯ ವಾಸ್ತವ ಅವಧಿಯವರೆಗೆ ಎಂದರೆ 14 ದಿನಗಳವರೆಗೆ ಮತ್ತು ಅಲ್ಲಿಗೆ ಹೋಗಿ ಬರುವ ಪ್ರವಾಸದ ನಿಮಿತ್ತದ ದಿನಗಳವರೆಗೆ ಸಾಂದರ್ಭಿಕ ರಜೆಯನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತುತ ವೈದ್ಯಕೀಯ ವಿದ್ಯಾಮಾನಗಳಂತೆ ಪ್ರತಿ ದಿವಸದ ಚುಚ್ಚುಮದ್ದಿನ ಚಿಕಿತ್ಸಾ ಪದ್ಧತಿಯ ಬದಲಾಗಿ ನಿರ್ದಿಷ್ಟ ಅಂತರಗಳಲ್ಲಿ ಒಟ್ಟು 0,3,7,28ನೇ ದಿವಸಗಳಂದು ಚುಚ್ಚುಮದ್ದು ನೀಡುವ ಚಿಕಿತ್ಸಾ ಪದ್ಧತಿಯನ್ನು ಅನುಸರಿಸಲಾಗುತ್ತಿದ್ದು, ವಿಶೇಷ ಸಾಂದರ್ಭಿಕ ರಜೆ ಮಂಜೂರಾತಿ ಮಾಡುವ ಸಂಬಂಧದಲ್ಲಿ ಸಕ್ಷಮ ಮಂಜೂರಾತಿ ಪ್ರಾಧಿಕಾರಗಳು ಅಭಿಪ್ರಾಯ ಕೋರುತ್ತಿರುವುದನ್ನು ಉಲ್ಲೇಖಿಸಿ, ಸರ್ಕಾರದ ಸ್ಪಷ್ಟೀಕರಣ ಕೋರಲಾಗಿದೆ. ಈ ಹಿನ್ನೆಲೆಯಲ್ಲಿ ವಿಷಯವನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂ: ಆಇ 2 ಸೇನಿಸೇ 2016, ಬೆಂಗಳೂರು, ದಿನಾಂಕ: 15–04–2016.**

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ಅನುಬಂಧ–ಬಿ ಯಲ್ಲಿನ ನಿಯಮ–5ನ್ನು ಕೆಳಕಂಡಂತೆ ತಿದ್ದುಪಡಿ ಮಾಡಿ ಈ ಆದೇಶದ ದಿನಾಂಕದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

**" (5) : ಹುಚ್ಚುಪ್ರಾಣಿ ಕಡಿದ ಸರ್ಕಾರಿ ನೌಕರನಿಗೆ ಚುಚ್ಚುಮದ್ದು ಪಡೆಯಬಹುದಾದ ವಾಸ್ತವ ದಿನಗಳಿಗೆ ಮಾತ್ರ ಮತ್ತು ಹುಚ್ಚುಪ್ರಾಣಿ ಕಡಿತದ ಪರಿಣಾಮವಾಗಿ ನಿರಂತರ ಚಿಕಿತ್ಸೆಯ ಅಗತ್ಯತೆಯ ಬಗ್ಗೆ ವೈದ್ಯರು ದೃಢೀಕರಿಸಿ ನೀಡುವ ವೈದ್ಯಕೀಯ ಪ್ರಮಾಣ ಪತ್ರ ಆಧಾರದ ಮೇರೆಗೆ ಗರಿಷ್ಠ 14 ದಿನಗಳಿಗೆ ಸೀಮಿತಗೊಳಿಸಿ ಸಾಂದರ್ಭಿಕ ರಜೆಯನ್ನು ಕೊಡಬಹುದು. ಇಂಥ ರಜೆಯ ಹೊರತಾಗಿ ಇನ್ನೂ ಹೆಚ್ಚಿನ ರಜೆ ಬೇಕಾಗಿರುವಲ್ಲಿ ಅದನ್ನು ಗಳಿಕೆ ರಜೆ ಅಥವಾ ಹಕ್ಕಿನ ರಜೆ ಅಥವಾ ಅರ್ಧ ವೇತನ ರಜೆಯಾಗಿ ಪರಿಗಣಿಸಬೇಕು."**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಸುವರ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ. (ಸೇವೆಗಳು)

## FINANCE SECRETARIAT

**Sub:** Sanction of Special Casual Leave to Government employees who has been bitten by a rabid animal – regarding.

**Read:** 1) Office of the District Surgeon, Tilaknagar, Mysuru District, Mysuru-Letter No- D.S.O. My/[1] 304/2015-16, dated:22-01-2016.

**Preamble :**

According to Rule 5 in Annexure 'B' of Karnataka Civil Services Rules casual leave may be granted to a Government Servant who has been bitten by a rabid animal to enable him to proceed for treatment for the actual period of treatment-14 days. In the letter read above, it is informed that, clarification is being sought from the authorities in regard to sanction of Casual leave as there is change in the

